

2021

# ಧಾರ್ಮಿಕ ಆಚರಣೆಗಳ ಪಕ್ಷಿನೋಟ



ಶ್ರೀದತ್ತ ದಿಕ್ಷಿತ ಓಣಿಕೈ

ಬೆಂಗಳೂರು

# ಶುಭ-ಆಶೀರ್ವಾದಗಳು



**ಪರಮ ಪೂಜ್ಯ ಸದ್ಗುರು ನಾರಾಯನಾಂದ ತೀರ್ಥ ಮಹಾಸ್ವಾಮಿಗಳು**

ಶ್ರೀ ಕ್ಷೇತ್ರ ಔದುಂಬರ, ತಾಲೂಕ ಪಲುಸ, ಜಿಲ್ಲಾ ಸಾಂಗ್ಲಿ - 416320, ಮಹಾರಾಷ್ಟ್ರ

ಪೂರ್ವಾಶ್ರಮ

**ಶ್ರೀ ವೇದಮೂರ್ತಿ ತಿಮ್ಮಣ್ಣ ನರಸಿಂಹ ದಿಕ್ಷಿತ, ಒಣಿಕೈ,**

(02/09/1886 - 15/02/1968)

ಪೋಸ್ಟ: ಪಂಚಲಿಂಗ, ತಾಲೂಕ : ಶಿರಸಿ, ಉತ್ತರಕನ್ನಡ 581403 ಕರ್ನಾಟಕ

ಶ್ರೀ ತಿಮ್ಮಣ್ಣ ಭಟ್ಟ ಮತ್ತು ಶ್ರೀಮತಿ ಯಮುನಾ ಅವರ ಕಿರು ಪರಿಚಯ

ತಿಮ್ಮಣ್ಣ ಭಟ್ಟರು ಭಾದ್ರಪದ ಶುದ್ದ ಪಂಚಮಿ 1808ರಲ್ಲಿ ಜನನ, (ಗುರುವಾರ 2ನೆ ಸೆಪ್ಟಂಬರ್ 1886). 8 ವರ್ಷಕ್ಕೆ ಉಪನಯನ, ಗೋಕರ್ಣದ ಗಾಯತ್ರಿ ತಿಮ್ಮಣ್ಣ ಭಟ್ಟರಲ್ಲಿ ಕೃಷ್ಣ ಯುಜುರ್ವೇದ ಅಭ್ಯಾಸ. ಶ್ರೀ ಶಿವಾನಂದ ಸರಸ್ವತಿ ಶಿಗೆಹಳ್ಳಿ ಅವರ ಸನ್ಯಾಸ ದೀಕ್ಷೆ ಸಮಾರಂಭದ ಪೌರೋಹಿತ್ಯ ವಹಿಸಿದರು. ಕಡಬಾಳದ ಯಮುನಾ ಅವರನ್ನು ಮದುವೆಯಾಗಿ ನರಸಿಂಹ, ಯಜ್ಞನಾರಾಯಣ, ಮಹಾದೇವಿ, ದತ್ತಾತ್ರೇಯ, ದಕ್ಷಿಣಾಮೂರ್ತಿ, ರಾಮಚಂದ್ರ, ಗಂಗಾ ಒಟ್ಟು 7 ಮಕ್ಕಳನ್ನು ಪಡೆದರು ಹಾಗೂ ಅಗ್ನಿಹೋತ್ರವನ್ನು ಶುರು ಮಾಡಿದರು. ಸೋಮಯಾಗ ಯಜ್ಞವನ್ನು ಪೂರೈಸಿ ತಿಮ್ಮಣ್ಣ ದಿಕ್ಷಿತ್ ಎನಿಸಿಕೊಂಡರು. ಚಾತುರ್ಮಾಸ ಯಾಗ ಮತ್ತು ನಕ್ಷತ್ರ ಯಾಗಗಳನ್ನೂ ನೆರವೇರಿಸಿದರು. 30ನೆ ವಯಸ್ಸಿನಲ್ಲಿ ದತ್ತಮಂದಿರವನ್ನು ಸ್ಥಾಪಿಸಿದರು. ಶ್ರೀಧರ ಸ್ವಾಮೀ ಮತ್ತು ಇತರರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಶ್ರಾವಣ ಶುದ್ದ ಪಂಚಮಿ ಬುಧವಾರ 1873 ಶಕೆ (ಆಗಸ್ಟ್ 8 1951) ಔದಂಬರದಲ್ಲಿ ತಾವೇ ಸನ್ಯಾಸ ದೀಕ್ಷೆ ಸ್ವೀಕರಿಸಿ ಶ್ರೀ ನಾರಾಯಣಾನಂದ ತೀರ್ಥರಾದರು. ಟೆಂಬೆ ಮಹಾರಾಜ, ಅವಧೂತ ಸ್ವಾಮಿ, ಅಕ್ಕಲಕೋಟ ಮಹಾರಾಜ ಮುಂತಾದವರ ಒಡನಾಟ. ಔದಂಬರದಲ್ಲಿ ಶ್ರೀ ಗುರು ಶಿವಶಂಕರಾನಂದ ಆಶ್ರಮ ಸ್ಥಾಪನೆ. ದತ್ತಮಂದಿರ ಸ್ಥಾಪನೆ. ಮಾಘ ಬಹುಳ ಪಾಡ್ಯ 1889 ರಂದು ತಮ್ಮ 82ನೆ ವಯಸ್ಸಿನಲ್ಲಿ ಸಮಾಧಿ ಹೊಂದಿದರು. (ಗುರುವಾರ ಫೆಬ್ರವರಿ 15 1968)

# ಪ್ರಕಾಶಕರ ನುಡಿ

ಮನುಷ್ಯನಿಗೆ ಮಾತ್ರ ಧರ್ಮವನ್ನು ಆಚರಿಸುವ ಸಾಮರ್ಥ್ಯವಿರುವುದು. ಧರ್ಮಾಚರಣೆಯಿಂದಲೇ ಒಬ್ಬ ವ್ಯಕ್ತಿಯು ಸುಂದರವಾದ ಬದುಕನ್ನು ತಾನು ಅನುಭವಿಸುವುದಲ್ಲದೆ, ತನ್ನ ಕುಟುಂಬ, ಸಮಾಜ, ದೇಶ ಹೀಗೆ ಎಲ್ಲವನ್ನು ಬೆಳೆಸಿ ಮೋಕ್ಷ ಸಾಧನೆ ಸಾಧ್ಯವಾಗುವುದು. ಧರ್ಮದ ಸ್ವರೂಪವನ್ನು ವೇದಗಳು, ಶಾಸ್ತ್ರಗಳು, ಉಪನಿಷತ್ತುಗಳು, ಪುರಾಣಗಳು ಮುಂತಾದವುಗಳಿಂದ ತಿಳಿಯಬಹುದಾಗಿದೆ. ಅನೂಚಾನವಾಗಿ ಧರ್ಮಾಚರಣೆ ಮುಂದುವರೆಸಲು ನಮ್ಮ ಪೂರ್ವಜರು ಎಲ್ಲ ಸ್ತರಗಳಲ್ಲಿ ವ್ಯಕ್ತಿ, ಕುಟುಂಬ, ಸಮಾಜ, ದೇಶ, ಹಾಗೂ ಎಲ್ಲ ಕಾಲದಲ್ಲಿ ಅಂದರೆ ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ, ಹುಟ್ಟಿದಾಗಿನಿಂದ ಸಾಯುವವರೆಗೆ ಮನುಷ್ಯನಾದವನು ಪಾಲಿಸಬೇಕಾದ ನಿಯಮಗಳನ್ನು ರೂಪಿಸಿದ್ದಾರೆ. ಈ ನಿಯಮಗಳು ಎಲ್ಲರಿಗೆ ಎಲ್ಲ ಕಾಲದಲ್ಲಿ ವ್ಯವಸ್ಥಿತವಾಗಿ ಸಿಗುವಂತಾಗಲು, ಸಮಾಜದ ಪ್ರತಿಯೊಬ್ಬನೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧದ ಪುರುಷಾರ್ಥಗಳನ್ನು ಪಡೆಯಬೇಕೆಂಬ ಸಂಕಲ್ಪದಿಂದ, ಮಠಮಾನ್ಯಗಳು, ಸಂಘ ಸಂಸ್ಥೆಗಳು, ದೇವಾಲಯಗಳು, ಸನ್ಯಾಸಿಗಳು, ಪುರೋಹಿತರು, ಅರ್ಚಕರು ಹೀಗೆ ಅನೇಕರನ್ನೊಳಗೊಂಡ ಸುಂದರವಾದ ವ್ಯವಸ್ಥೆಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವುದೇ ಈ ಸಂಗ್ರಹದ ಉದ್ದೇಶ.

ಕೃಷ್ಣ ಯಜುರ್ವೇದ-ಬೋಧಾಯನೀಯ ಸ್ಮಾರ್ತ ಹವ್ಯಕ ಸಂಪ್ರದಾಯಸ್ಥ ಮನೆತನವಾದ ಓಣಿಕೈ ಕುಟುಂಬವು ಎಲ್ಲ ಧಾರ್ಮಿಕ - ವೈದಿಕ, ಹಬ್ಬ - ಹರಿದಿನಗಳು, ಹಿರಿಯರ ದಿನಗಳನ್ನು ಪೂರ್ವಜರು ಹಾಕಿಕೊಟ್ಟ ಪದ್ಧತಿಯಂತೆ ಅನೂಚಾನವಾಗಿ ನಡೆಸಿಕೊಂಡು ಬರುತ್ತಾ ಇದ್ದಾರೆ . ಅಪಾರ ಆಸ್ತಿಕ ಶಿಷ್ಯರನ್ನೂ ಕಾಲಮಾನಕ್ಕೆ ಅನುಗುಣವಾಗಿ ಅಲ್ಪಸ್ವಲ್ಪ ತಿದ್ದುಪಡಿಗಳೊಂದಿಗೆ ಮಾರ್ಗದರ್ಶಕ ಸ್ಥಾನದಲ್ಲಿ ನಿಂತು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

ನಮ್ಮ ಕುಟುಂಬದವರು ಹಾಗೂ ಶಿಷ್ಯರು, ಬೆಂಗಳೂರು, ಔದುಂಬರ, ಮುಂತಾದ ಊರುಗಳಲ್ಲಿ ನೆಲೆಸಿದ್ದಾರೆ. ಅಲ್ಲಿಯೂ ಧಾರ್ಮಿಕ, ವೈದಿಕ ಆಚಾರ ವಿಚಾರಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲವಾಗುವ ನಿಟ್ಟಿನಲ್ಲಿ, ಹಾಗೂ ಈ ಎಲ್ಲಾ ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುವತ್ತ, ಪ ಪೂ ನಾರಾಯಣಾನಂದ ತೀರ್ಥ ಪ್ರತಿಷ್ಠಾನವು ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯಡಿಯಲ್ಲಿ ಪ್ರಕಟಣಾ ಕಾರ್ಯದಲ್ಲಿ ತೊಡಗಿಸಿಕೊಂಡಿದೆ.

ಆಸಕ್ತ ಜನಸಾಮಾನ್ಯರಿಗೆ ಸರಳ ಕನ್ನಡಭಾಷೆಯಲ್ಲಿ, ಚಿಕ್ಕ ಚಿಕ್ಕ ಪ್ರಕಟಣೆಗಳ ಮೂಲಕ ಉಚಿತವಾಗಿ ಒದಗಿಸುವ ಉದ್ದೇಶ ಪ್ರತಿಷ್ಠಾನದ್ದು. ಪ್ರತಿಷ್ಠಾನದ ಈ ಸೇವಾ ಕಾರ್ಯದಲ್ಲಿ ವಿಷಯ ಸಂಗ್ರಹಣೆ, ಸಂಪಾದನೆ, ಕರಡು ಪರಿಷ್ಕರಣೆ, ವಿನ್ಯಾಸ ಹೀಗೆ ಹಲವು ಕೆಲಸಗಳಲ್ಲಿ ಸಲಹೆ, ಸಹಾಯ, ಸಹಕಾರ ನೀಡಿದ ನನ್ನ ತಮ್ಮ ಶ್ರೀ ಕೇಶವ, ಪತ್ನಿ ಶ್ರೀಮತಿ ಭಾಗೀರಥಿ, ಹಾಗೂ ಪ್ರತ್ಯಕ್ಷ-ಪರೋಕ್ಷವಾಗಿ ಪರಿಶ್ರಮಿಸಿದ ಎಲ್ಲರಿಗೂ ಕೃತಜ್ಞತೆಗಳು. ಆಸಕ್ತ ಆಸ್ತಿಕಲೋಕ ಸಹೃಯದಯರಾಗಿ ಸ್ವೀಕರಿಸಬೇಕೆಂದು ಕೋರಿದೆ.

**ಪ್ರಕಾಶಕರು**

# “Dharmika Acharanegala Paxinota”

Smt. Kamala Daxinamurthy Grantha Maalike

Axi – 23

Compiled by

**Shridatta Dixit Onikai**,
Bengaluru

First Print: 2021



Price: Free

Publisher



**Pa. Pu. Narayanananda Tirtha Pratistana (R)**

No 431, ShriRaksha, 7th Main Road, ISRO Layout, Bengaluru - 560111, Karnataka, Cell No. 9448242402, Email: sddixit@outlook.com

# ಧಾರ್ಮಿಕ ಆಚರಣೆಗಳ ಪಕ್ಷಿನೋಟ

ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆ

ಅಕ್ಷಿ – 23

ಸಂಪಾದನೆ

**ಶ್ರೀದತ್ತ ದಿಕ್ಷಿತ ಓಣಿಕೈ, ಬೆಂಗಳೂರು**



ಪ್ರಕಾಶಕರು



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,

ಕರ್ನಾಟಕ, ದೂರವಾಣಿ : +91 94482 42402, sddixit@outlook.com

# ಅನುಕ್ರಮಣಿಕೆ

# 1 ಪೀಠಿಕೆ

ಮಾನವರಲ್ಲಿರುವ ದೇವರ ಬಗೆಗಿನ ಕಲ್ಪನೆಗಳು ಮತ್ತು ನಂಬುಗೆಗಳು ಸಾವಿರಾರುವರ್ಷ ಪುರಾತನವಾದವು. ಈ ನಂಬುಗೆ ಜನರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿವೆ. ಹಿಂದೂಸಮಾಜದ ಜನರಲ್ಲಿ ಏಕೈಕ ದೇವರ ಕಲ್ಪನೆಯನ್ನು ಉಪನಿಷತ ಕಾಲದಲ್ಲಿ ಕಾಣಬಹುದು. ಸಾಮಾನ್ಯಜನರ ಮಾನಸಿಕ ಇತಿಮಿತಿಗಳನ್ನು ಮತ್ತು ಬಯಕೆಗಳನ್ನು ಗಮನಿಸಿದ ತತ್ವಜ್ಞಾನಿಗಳು, ನೂರಾರು ದೇವತೆಗಳ ವಿವಿಧ ಆರಾಧನಾ ಮಾರ್ಗಗಳನ್ನು ರೂಪಿಸಿಕೊಟ್ಟರು. ಪೂಜೆ-ಪುನಸ್ಕಾರ, ಜಪ-ತಪ, ಹೋಮ-ಹವನ, ದಾನ-ತರ್ಪಣೆ-ಸಂತರ್ಪಣೆ, ನೃತ್ಯ-ಗಾಯನ, ಕೀರ್ತನೆ-ಭಜನೆ, ಪ್ರದಕ್ಷಿಣೆ-ನಮಸ್ಕಾರ, ಕ್ಷೇತ್ರದರ್ಶನ-ತೀರ್ಥಸ್ನಾನ ಹೀಗೆ ಹತ್ತು-ಹಲವು ಮಾರ್ಗಗಳು. ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು ಎಂಬ ಐದು ದೇವತೆಗಳ **ಪಂಚಾಯತನ** ಪೂಜಾಕ್ರಮವನ್ನು **ಶ್ರೀ ಆದಿ ಶಂಕರಾಚಾರ್ಯರು** ಪ್ರಚುರ ಪಡಿಸಿದರೆಂಬುದು ಪ್ರತೀತಿ.

ಪ್ರತಿಯೊಬ್ಬನೂ ನೆನಪಿನಲ್ಲಿಟ್ಟುಕೊಂಡಿರಬೇಕಾದ ವಿಷಯ: 1. ತನ್ನ ವೇದ ಶಾಖೆ ಮತ್ತು ಸೂತ್ರ, 2. ಗೋತ್ರ ಪ್ರವರ, 3. ಕುಲದೇವತೆ, ಗುರುಪೀಠ, 4. ತಂದೆ- ತಾಯಿ, ಅಜ್ಜ- ಅಜ್ಜಿ, ಮುತಜ್ಜ- ಮುತ್ತಜ್ಜಿ, ಇವರ ಹೆಸರುಗಳು. ಹಾಗೆಯೇ ಮಾತೃವರ್ಗದಲ್ಲಿ ಅಜ್ಜ- ಅಜ್ಜಿ, ಮುತ್ತಜ್ಜ- ಮುತ್ತಜ್ಜಿ, ಇವರ ಹೆಸರುಗಳು ಮತ್ತು ಮಾತೃವರ್ಗದ ಗೋತ್ರ. 5. ತಂದೆ- ತಾಯಿಗಳು ಮೃತರಾಗಿದ್ದರೆ ಮರಣವಾದ ತಿಂಗಳು, ಪಕ್ಷ ಮತ್ತು ತಿಥಿ.

ಪ್ರತಿಯೊಬ್ಬಬ್ರಾಹ್ಮಣರ ಮನೆಯಲ್ಲಿ ಅವಶ್ಯವಾಗಿ ಇರಬೇಕಾದ ವಸ್ತುಗಳು: 1. ಇಷ್ಟವಾದ ಒಂದು ದೇವರ ಪಟ, ಕುಲದೇವತೆಯ ಪಟ, ಮಠಾಧಿಪತಿಗಳ ಪಟ. 2. ಶ್ರೀ ಶಂಕರಾಚಾರ್ಯರ ಪಟ. 3. ಉಡುವ ಮತ್ತು ಹೊದೆಯುವ ಮಡಿ. 4. ಹರಿವಾಣ ತಂಬಿಗೆ, ಪಂಚಪಾತ್ರೆ, ಉದ್ಧರಣೆ, ಘಂಟೆ, ಆರತಿ, ದೀಪ ಹಚ್ಚುವ ಗಿಣಗಲು. 5. ಭಸ್ಮ (ವಿಭೂತಿ) ಅರಿಸಿಣ, ಕುಂಕುಮ, ರಂಗವಲ್ಲೀ, ಧೂಪದ ಕಡ್ಡಿ, ಬತ್ತಿ, ಕರ್ಪೂರ. 6. ಭಗವದ್ಗೀತೆಯ ಒಂದು ಪುಸ್ತಕ, ವಿಷ್ಣು ಸಹಸ್ರನಾಮದ ಪುಸ್ತಕ, ಆಯಾವರ್ಷದ

ಪಂಚಾಂಗ. 7. ದರ್ಭೆ, ಕರಿಯ ಎಳ್ಳು, 8. ಮರದ ಮಣೆ, ಚಿಕ್ಕ ಚಾಪೆಗಳು. 9. ಬಿಡಿ ಜನಿವಾರಗಳು. 10. ಗಂಗಾಜಲವನ್ನು ತುಂಬಿದ ಕಲಶ. 11. ಶಂಖ, ಜಾಗಟೆ, ತಾಳ.

ಇಲ್ಲಿ ನನ್ನ ಯಾವುದೇ ಸ್ವಂತ ಕೆಲಸವಿಲ್ಲ. ಇದು ವಿಷಯಗಳ ಸಂಪಾದನೆ. ಪ್ರಸ್ತುತ ಸಂಕಲನದ ಮುಖ್ಯ ಆಕರ ಗ್ರಂಥ ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದವರ ಶ್ರೀ ಭಗವತ್ಪಾದ ಪ್ರಕಾಶನದವರು ಪ್ರಕಟಿಸಿದ "ಭೌಧಾಯನೀಯ ನಿತ್ಯಕರ್ಮ". ಇದಲ್ಲದೆ ಅವಶ್ಯವಿರುವ ಕಡೆ ಬೇರೆ ಗ್ರಂಥಗಳ ಸಹಾಯ ಪಡೆದಿದ್ದೇನೆ. https://sanskritdocuments.org/, ಅವರೆಲ್ಲರಿಗೆ ನನ್ನ ಕೃತಜ್ಞತೆಗಳು. ಈ ಸಂಕಲನದಲ್ಲಿ ಧಾರ್ಮಿಕ ಆಚರಣೆಗಳ ಪಕ್ಷಿನೋಟ ತಿಳಿಸಿದೆ. ನಿಮಗೆ ಶಾಂತಿ, ಸಮಾಧಾನ ದೊರೆತು ಇಚ್ಛಾ ಪೂರೈಕೆ ಆದರೆ ನಮ್ಮ ಶ್ರಮ ಸಾರ್ಥಕ.

----- ****** -----

# 2 ಷೋಡಶ ಸಂಸ್ಕಾರಗಳು

ಸಂಸ್ಕಾರಗಳು ಎಂದರೆ ಹೇಗೆ ಕೃಷಿಕನು ತನ್ನ ಹೊಲದಿಂದ ಭತ್ತದ ಗಿಡವನ್ನು ಕೊಯ್ದುತಂದು ಭತ್ತಗಳನ್ನು ಬೇರ್ಪಡಿಸಿ ಕುಟ್ಟಿ ಶುದ್ದಿಗೊಳಿಸಿ ಉತ್ತಮವಾದ ಅಕ್ಕಿಯನ್ನು ತಯಾರಿಸುವನೋ, ಹಾಗೇ ಸಂಸ್ಕಾರ ಎನ್ನುವುದು ಮನುಷ್ಯನನ್ನು ಪರಿಪಕ್ವನನ್ನಾಗಿ ಮಾಡುವುದು, ಶುದ್ಧೀಕರಿಸುವಂತಹದ್ದು. ಪ್ರಧಾನವಾಗಿ 16 ಸಂಸ್ಕಾರಗಳು ಇವೆ. ಗೃಹ್ಯ ಸೂತ್ರಗಳ ಪ್ರಕಾರ 12 ರಿಂದ 18 ವರೆಗೆ ಇದೆ. ವಿಷ್ಣುಬಲಿ ಉಪಾಕರ್ಮ, ಉತ್ಸರ್ಜನ, ಕರ್ಣವೇಧನ, ವಿದ್ಯಾರಂಭ, ಸ್ಮಾರ್ತಾಗ್ನಿ ಹೋತ್ರ, ಔರ್ಧ್ವದೇಹಿಕ ಅಥವಾ ಅಂತ್ಯೇಷ್ಟಿ ಅಥವಾ ಅಂತ್ಯಕ್ರಿಯೆ ಮುಂತಾದವನ್ನೂ ಸಂಸ್ಕಾರಗಳಲ್ಲಿ ಸೇರಿಸುವ ರೂಢಿಯುಂಟು.

## 2.1 ಗರ್ಭಾದಾನ

ಹೆಣ್ಣು ಮತ್ತು ಗಂಡು ಮದುವೆಯಾಗಿ ಅವರು ಸೇರುವ ಮುನ್ನ ತಮ್ಮ ಜನ್ಮಾಂತರದಿಂದ ಬರುವಂತಹ ದೋಷ ನಿವಾರಣೆಗಾಗಿ ಗರ್ಭಾದಾನವೆಂಬ ವೈದಿಕ ಸಂಸ್ಕಾರವನ್ನು ಮಾಡಬೇಕು. **ಗರ್ಭಾದಾನವನ್ನು ಯಾವಾಗ ಮಾಡಬೇಕು? ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ **ನಕ್ಷತ್ರ**: ಅಶ್ವಿನಿ, ರೋಹಿಣಿ, ಉತ್ತರಾ, ಹಸ್ತ, ಸ್ವಾತಿ, ಅನುರಾಧಾ,ಮೂಲಾ, ಉ.ಷಾಢಾ, ಶ್ರವಣ, ರೇವತಿ, ಉ. ಭಾದ್ರ **ತಿಥಿ:** ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ **ಕಾಲ:** ರಸಜ್ವಲೆ ಅಥವಾ ಋತುಮತಿಯಾದ ಮೇಲಿನ 5 ರಿಂದ 10 ದಿನದವರೆಗೆ ಮತ್ತು 14 ರಿಂದ 16 ದಿನದ ರಾತ್ರಿಯವರೆಗೆ. **ಲಗ್ನ:** ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ಧನು, ಮೀನ ಹೀಗೆ ವೈದಿಕ ಸಂಸ್ಕಾರವಾದ ನಂತರ ಮೇಲೆ ಹೇಳಿದ ವಾರ, ತಿಥಿ, ನಕ್ಷತ್ರ, ಲಗ್ನಗಳಲ್ಲಿ ಪತಿ-ಪತ್ನಿಯರು ಸೇರಬೇಕು.

## 2.2 ಪುಂಸವನ ಸಂಸ್ಕಾರ

ಪ್ರಥಮ ಗರ್ಭ ಉಂಟಾದ 3ನೇ ತಿಂಗಳಿನಲ್ಲಿ ಪುತ್ರ ಸಂತತಿ ಪ್ರಾಪ್ತಿಗಾಗಿ ಈ ವೈದಿಕ ಸಂಸ್ಕಾರವನ್ನು ಮಾಡಬೇಕು. ಈ ವಿಧಿಯಲ್ಲಿ ವಿಶೇಷವಾಗಿ 2 ಉದ್ದು ಮತ್ತು 1

ಗೋಧಿಯ ಪ್ರಾಶನವನ್ನು ವಿಧಿಸಿದೆ. ಪುಂಸವನ ಸಂಸ್ಕಾರವನ್ನು ಯಾವಾಗ ಮಾಡಬೇಕು? ವಾರ: ಸೋಮವಾರ, ಬುಧವಾರ, ಶುಕ್ರವಾರ ನಕ್ಷತ್ರ: ಅಶ್ವಿನಿ, ರೋಹಿಣಿ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನುರಾಧಾ, ಶ್ರವಣ, ಉ. ಭಾದ್ರ ತಿಥಿ: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ ಕಾಲ: 3ನೇ ತಿಂಗಳಿನಲ್ಲಿ ಲಗ್ನ: ಮೇಷ, ಧನು, ಮೀನ ಈ ತಿಥಿ, ವಾರ, ನಕ್ಷತ್ರ, ಲಗ್ನ, ಕಾಲಗಳಲ್ಲಿ ಪುಂಸವನ ಸಂಸ್ಕಾರವನ್ನು ಮಾಡಬೇಕು.

## 2.3 ಅನವಲೋಭನ ಸಂಸ್ಕಾರ

ಗರ್ಭವು ಮಧ್ಯದಲ್ಲಿ ನಾಶವಾಗದಂತೆ ರಕ್ಷಿಸಲು ಈ ವೈದಿಕ ಸಂಸ್ಕಾರವನ್ನು ಮಾಡಬೇಕು. ಈ ಸಂಸ್ಕಾರವನ್ನು ಪುಂಸವನ ಸಂಸ್ಕಾರದಲ್ಲಿ ಹೇಳಲಾದ ತಿಥಿ, ವಾರ, ನಕ್ಷತ್ರ, ಲಗ್ನದಲ್ಲಿ 3ನೇ ಅಥವಾ 4ನೇ ತಿಂಗಳಲ್ಲಿ ಮಾಡಬೇಕು.

## 2.4 ಸೀಮಂತ ಸಂಸ್ಕಾರ

ಈ ಸಂಸ್ಕಾರವನ್ನು ಗರ್ಭಿಣಿಯ ಪ್ರಥಮ ಗರ್ಭದ 7 ನೇ ಅಥವ 9 ನೇ ತಿಂಗಳಲ್ಲಿ ಮಾಡಬೇಕು. ವೈದಿಕರಿಂದ ಉದಕ ಶಾಂತ್ಯಾದಿಯನ್ನು ಮಾಡಿಸಿ, ಗರ್ಭಿಣಿಯು ಬಯಸುವ ತಿಂಡಿ ತಿನಿಸುಗಳನ್ನು ಮಾಡಿ, ಉಡಿಯನ್ನು ತುಂಬಿ ಗುರು-ಹಿರಿಯರಿಂದ ಆಶೀರ್ವಾದವನ್ನು ಪಡೆಯುವುದು. ಇದು ಗರ್ಭಿಣಿಗೆ ಮಾಡುವಂತಹ ಮೊದಲನೆ ಸಂಸ್ಕಾರವಾಗಿರುತ್ತದೆ. ಸುಖ ಪ್ರಸವ ಹಾಗೂ ಗರ್ಭಸ್ಥ ಶಿಶುವಿನ ಸುಬುದ್ಧಿ ಬೆಳವಣಿಗೆಗೂ ಅನುಕೂಲವಾಗುತ್ತದೆ. ಯಾವಾಗ ಈ ಸಂಸ್ಕಾರವನ್ನು ಮಾಡಬೇಕು? **ವಾರ:** ಸೋಮವಾರ, ಬುಧವಾರ, ಶುಕ್ರವಾರ **ನಕ್ಷತ್ರ:** ಅಶ್ವಿನಿ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಉತ್ತರಾ, ಹಸ್ತ, ಸ್ವಾತಿ, ಅನುರಾಧಾ, ಮೂಲ, ಉ.ಷಾಡ, ಶ್ರವಣ, ಉ. ಭಾದ್ರ, ರೇವತಿ **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ **ಲಗ್ನ**: ಮೇಷ, ಧನು, ಮೀನ ಉತ್ತಮ. ವೃಷಭ, ಕರ್ಕ ಸಾಮಾನ್ಯ. ಕಾಲ: ಪ್ರಥಮ ಗರ್ಭದ 7 ಅಥವಾ 8ನೇ ತಿಂಗಳು (6ನೇ ಮತ್ತು 8ನೇ ತಿಂಗಳಲ್ಲೂ ಕೆಲವರು ಮಾಡುತ್ತಾರೆ.)

## 2.5 ಜಾತಕರ್ಮ ಸಂಸ್ಕಾರ

ಈ ಸಂಸ್ಕಾರವನ್ನು ಮಗು ಜನಿಸಿದ ಮೇಲೆ ಮಗುವಿಗೆ ಎಲ್ಲಾ ವಿಧವಾದ ಮೃತ್ಯು ಪೀಡೆ ಪರಿಹಾರವಾಗಿ ಆಯುಃ ಶ್ರೀಃ ಬಲ ವೃದ್ಧಿಗಾಗಿ ಮಾಡುತ್ತಾರೆ. ಈ ವೇಳೆಯಲ್ಲಿ ಮಗುವಿಗೆ ಸುವರ್ಣದಿಂದ ಜೇನುತುಪ್ಪ ಮತ್ತು ತುಪ್ಪದ ಮಿಶ್ರಣವನ್ನು ಬಾಯಿಗೆ ಹಾಕುವುದು ರೂಢಿ. ಈ ಸಂಸ್ಕಾರ ಯಾವಾಗ ಮಾಡಬೇಕು? **ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ **ನಕ್ಷತ್ರ**: ಅಶ್ವಿನಿ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಉತ್ತರಾ, ಹಸ್ತ, ಸ್ವಾತಿ, ಅನುರಾಧಾ, ಮೂಲ, ಶ್ರವಣ, ಉ. ಭಾದ್ರ, ರೇವತಿ **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿಯಲ್ಲಿ ಚಂದ್ರಬಲವನ್ನು ನೋಡಿ ಮಾಡಬೇಕು.

## 2.6 ನಾಮಕರಣ ಸಂಸ್ಕಾರ

ಇದನ್ನು ಮಗು ಜನಿಸಿದ 11ನೇ ದಿನ ಗೋಮಯ ಮತ್ತು ಪುಣ್ಯಾಹವಾಚನೆಗಳಿಂದ ಶುದ್ಧಗೊಳಿಸಿದ ಮೇಲೆ ಆಯುರ್ವೃದ್ಧಿ ಹಾಗೂ ಲೋಕದಲ್ಲಿ ವ್ಯವಹಾರ ಮತ್ತು ಪ್ರತಿಷ್ಠೆ ಪ್ರಾಪ್ತಿಗಾಗಿ ಮಾಡುತ್ತಾರೆ. ಈ ಸಂಸ್ಕಾರವನ್ನು ಯಾವಾಗ ಮಾಡಬೇಕು? **ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ **ನಕ್ಷತ್ರ**: ಅಶ್ವಿನಿ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಮಘ, ಉತ್ತರಾ, ಹಸ್ತ, ಸ್ವಾತಿ, ಅನುರಾಧಾ, ಶ್ರವಣ, ಉ.ಷಾಢ, ಉ.ಭಾದ್ರ, ರೇವತಿ **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ **ಲಗ್ನ**: ವೃಷಭ, ಸಿಂಹ, ಕುಂಭ ಉತ್ತಮ. (ಕರ್ಕ, ಮೀನ, ವೃಶ್ಚಿಕ ಸಾಮಾನ್ಯ) **ಕಾಲಗಳು**: ಮಗು ಜನಿಸಿದ 11ನೇ ದಿನ, ಇಲ್ಲವಾದಲ್ಲಿ 12ನೇ ದಿನ 16-20, 22ನೇ ದಿನದಲ್ಲಿ ಬ್ರಾಹ್ಮಣ ಮುಖೇನ ಮಾಡುವುದು ಉತ್ತಮ.

## 2.7 ನಿಷ್ಕ್ರಮಣ ಸಂಸ್ಕಾರ

ಈ ಸಂಸ್ಕಾರವನ್ನು ಸಾಮಾನ್ಯವಾಗಿ ನಾಮಕರಣವಾದ ಮೇಲೆ ಹಾಲು ಮತ್ತು ಮೊಸರು, ಗಂಧ, ಪುಷ್ಪಾಕ್ಷತೆ ಜೊತೆಗೆ ತಾಯಿ ಮತ್ತು ಮಗು ಮನೆಯಿಂದ ಹೊರಗೆ ಬಂದು ಇಂದ್ರಾದಿ ಎಂಟು ದಿಕ್ಕಿನ ದೇವತೆಗಳಿಗೆ ನಮಸ್ಕರಿಸಿ ಸೂರ್ಯ, ಚಂದ್ರ, ನಕ್ಷತ್ರ ಹಾಗೂ ದಿಗಂತದಲ್ಲಿರುವ ಎಲ್ಲ ದೇವತೆಗಳ ದರ್ಶನ ಪಡೆದು ಮಗುವನ್ನು

ರಕ್ಷಿಸುವಂತೆ ಪ್ರಾರ್ಥನೆ ಮಾಡುವುದು. ಅಲ್ಲದೇ ಗುರು-ಹಿರಿಯರಿಂದ ಆಶೀರ್ವಾದವನ್ನು ಪಡೆಯುವುದು. ಇದನ್ನು ಮಾನಸಿಕ ಹಾಗೂ ಶಾರೀರಿಕ ಶಕ್ತಿವರ್ಧನೆಗೆಂದು ಮಾಡಬೇಕು. ಇದನ್ನು ನಾಮಕರಣದ ಜೊತೆಗೆ ಮಾಡುವುದು ಉತ್ತಮ. ಇಲ್ಲವಾದರೆ ಅವರವರ ಪದ್ಧತಿಯಂತೆ ಮಾಡಬಹುದು.

## 2.8 ಅನ್ನ ಪ್ರಾಶನ ಸಂಸ್ಕಾರ

ಅನ್ನಮಯವಾದ ಈ ದೇಹಕ್ಕೆ ಅನ್ನವೇ ಪ್ರಾಣ. ಅನ್ನವೇ ಅಮೃತ, ಅನ್ನವೇ ಸರ್ವಸ್ವ. ಹೀಗಾಗಿ ಈ ಮಗುವಿಗೆ ಅನ್ನದಿಂದ ಆಯುಷ್ಯ, ತೇಜಸ್ಸು, ಬಲವೃದ್ಧಿಯಾಗಲೆಂದು ಅನ್ನಪ್ರಾಶನ ಮಾಡಬೇಕು. ಈ ವೇಳೆಯಲ್ಲಿ ಮಗುವಿಗೆ ಹಾಲು, ಮೊಸರು, ತುಪ್ಪ , ಜೇನುತುಪ್ಪ, ಸಕ್ಕರೆ ಈ ಪಂಚ ಅಮೃತ ಮಿಶ್ರಿತ ಅನ್ನವನ್ನು ಸುವರ್ಣದಿಂದ ಪ್ರಾಶನ ಮಾಡಿಸಬೇಕು. ಈ ಸಂಸ್ಕಾರವನ್ನು ಯಾವಾಗ ಮಾಡಬೇಕು? **ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ (ರವಿವಾರ) **ನಕ್ಷತ್ರ**: ಅಶ್ವಿನಿ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಉತ್ತರಾ, ಹಸ್ತ, ಸ್ವಾತಿ, ಅನುರಾಧಾ, ಶ್ರವಣ, ಉ. ಭಾದ್ರ, ರೇವತಿ **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ **ಲಗ್ನ**: ವೃಷಭ, ಮಿಥುನ, ಕರ್ಕ, ಧನು, ಮೀನ ಕಾಲ: ಚಂದ್ರ, ಬುಧ, ಗುರು, ಶುಕ್ರ ಗ್ರಹಗಳು ಶುಭವಿದ್ದಾಗ ಗುರು ಮತ್ತು ಶುಕ್ರ ಅಸ್ತಂಗತವಿಲ್ಲದಿರುವಾಗ ಮಾಡಬೇಕು. ಗಂಡು ಮಗುವಿಗೆ 6, 8, 10, 12 ನೇ ತಿಂಗಳಿನಲ್ಲಿ, ಹೆಣ್ಣು ಮಗುವಿಗೆ 7, 9, 11ನೇ ತಿಂಗಳಿನಲ್ಲಿ ಈ ಸಂಸ್ಕಾರವನ್ನು ಮಾಡಬೇಕು.

## 2.9 ಚೌಲ ಸಂಸ್ಕಾರ

ಜನನವಾದಾಗಿನಿಂದ ಬೆಳೆದು ಬಂದಿರುವ ಕೇಶಗಳನ್ನು ಮಗುವಿನ ಆಯುರ್ವೃದ್ಧಿ, ತೇಜಸ್ಸು ವೃದ್ಧಿಗಾಗಿ ಅವರವರ ಕುಲ ಧರ್ಮದಂತೆ ಜುಟ್ಟು ಬಿಡುವ ಮೂಲಕ ಕೇಶಗಳನ್ನು ಶಾಸ್ತ್ರೋಕ್ತವಾಗಿ ತೆಗೆಯುವ ಸಂಸ್ಕಾರ. ಈ ಸಂಸ್ಕಾರವನ್ನು ಯಾವಾಗ ಮಾಡಬೇಕು? **ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ (ರವಿವಾರ) **ನಕ್ಷತ್ರ**: ಅಶ್ವಿನಿ, ಮೃಗಶಿರಾ, ಪುನರ್ವಸು, ಪುಷ್ಯ, ಹಸ್ತ, ಶ್ರವಣ, ಧನಿಷ್ಠ

ಉತ್ತಮ.(ರೋಹಿಣಿ,ಉತ್ತರ, ಸ್ವಾತಿ, ಅನುರಾಧಾ, ಉ.ಷಾಢ, ಉ.ಭಾದ್ರಪದ ) **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ **ಲಗ್ನ**: ವೃಷಭ, ಮಿಥುನ, ಕರ್ಕ, ಧನು, ಮೀನ **ಕಾಲ**: ತಾಯಿ ಗರ್ಭಿಣಿ ಅಲ್ಲದಿರುವಾಗ ಜನ್ಮ ರಾಶಿಯಿಂದ ಅಷ್ಟಮ ಶುದ್ಧಿ ಇರುವಾಗ ಬೆಸ ತಿಂಗಳುಗಳಲ್ಲಿ ಅಂದರೆ 7, 9, 11ನೇ ತಿಂಗಳಿನಲ್ಲಿ ಅಥವಾ 3, 5ನೇ ವರ್ಷದಲ್ಲಿ ಉತ್ತರಾಯಣದಲ್ಲಿ ಮಾಡಬೇಕು.

## 2.10 ಉಪನಯನ ಸಂಸ್ಕಾರ

ಈ ಸಂಸ್ಕಾರವನ್ನು ಮಗುವಿಗೆ ಬುದ್ಧಿ, ಶಕ್ತಿ ವರ್ಧನೆಗೆ ಮತ್ತು ಬ್ರಹ್ಮ ತೇಜಸ್ಸು ವೃದ್ಧಿಗಾಗಿ ದ್ವಿಜತ್ವ ಪ್ರಾಪ್ತಿಗಾಗಿ ವೇದ, ಶಸ್ತ್ರ, ಪುರಾಣ ಅಧ್ಯಯನ, ಅಧಿಕಾರ ಪ್ರಾಪ್ತಿಗಾಗಿ ಮಾಡಲೇಬೇಕಾದಂತಹ ಸಂಸ್ಕಾರ. ಈ ಸಂಸ್ಕಾರವನ್ನು ಯಾವಾಗ ಮಾಡಬೇಕು? **ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ **ನಕ್ಷತ್ರ**: ಅಶ್ವಿನಿ, ಮೃಗಶಿರಾ, ಪುನರ್ವಸು, ಪುಷ್ಯ, ಹಸ್ತ, ಶ್ರವಣ, ಧನಿಷ್ಠ, ರೋಹಿಣಿ, ಉತ್ತರ, ಸ್ವಾತಿ, ಅನುರಾಧಾ, ಉ.ಭಾದ್ರಪದ, ರೇವತಿ **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ **ಲಗ್ನ**: ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕುಂಭ, ಮೀನ **ಕಾಲ**: ತಾಯಿ ಗರ್ಭಿಣಿ ಅಲ್ಲದಿರುವಾಗ ಮಗುವಿನ ಗರ್ಭಾದಿ ಅಷ್ಟಮ ವರ್ಷದಲ್ಲಿ ಅಂದರೆ ಬ್ರಾಹ್ಮಣರಿಗೆ 7 ಮತ್ತು 8ನೇ ವಯಸ್ಸಿನಲ್ಲಿ, ಕ್ಷತ್ರಿಯರಿಗೆ 9 ಮತ್ತು 10ನೇ ವಯಸ್ಸಿನಲ್ಲಿ, ವೈಶ್ಯರಿಗೆ 11ನೇ ವರ್ಷದವರೆಗೆ ಉತ್ತರಾಯಣದಲ್ಲಿ ಚಂದ್ರಬಲವಿರುವಾಗ ಈ ಸಂಸ್ಕಾರವನ್ನು ಮಾಡಬೇಕು.

## 2.11 ಮಹಾನಾಮ್ನಿ ವೃತ

## 2.12 ಮಹಾವೃತ

## 2.13 ಉಪನಿಷದ್ವೃತ

## 2.14 ಗೋದಾನ ವೃತ

## 2.15 ಸಮಾವರ್ತನ

## 2.16 ವಿವಾಹ ಸಂಸ್ಕಾರ

ಬ್ರಹ್ಮಚಾರಿಯು ಬ್ರಹ್ಮಚರ್ಯೆಯಿಂದ ಅಧ್ಯಯನಾದಿಗಳನ್ನು ಮುಗಿಸಿ, ಗ್ರಹಸ್ಥಾಶ್ರಮ ಧರ್ಮವನ್ನು ಸ್ವೀಕರಿಸುವ ವೇಳೆಯಲ್ಲಿ ಈ ಎಲ್ಲಾ ಸಂಸ್ಕಾರಾದಿಗಳನ್ನು ಮಾಡಬೇಕು. **ವಾರ**: ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ, ರವಿವಾರ **ನಕ್ಷತ್ರ**: ಅಶ್ವಿನಿ, ಮೃಗಶಿರಾ, ಮಘ, ಪುಷ್ಯ, ಹಸ್ತ, ಶ್ರವಣ, ರೋಹಿಣಿ,ಉತ್ತರ, ಸ್ವಾತಿ, ಅನುರಾಧಾ, ಉ.ಭಾದ್ರಪದ, ರೇವತಿ **ತಿಥಿ**: ದ್ವಿತೀಯ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ **ಲಗ್ನ**: ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ಧನು ಮೀನ ಕಾಲ: ವಿವಾಹ ಲಗ್ನಕ್ಕೆ ಸಪ್ತಮ, ಅಷ್ಟಮ ಸ್ಥಾನ ಶುದ್ಧಿ ಇರುವಾಗ ಈ ಸಂಸ್ಕಾರಾದಿಗಳನ್ನು ಮಾಡಬೇಕು.

----- ****** -----

# 3 ಪೂಜಾ ವಿಧಿ – ವಿಧಾನ

## 3.1 ಪೂಜೆಗೆ ಮುನ್ನ

ತಲೆಸ್ನಾನಮಾಡಿ / ಕೈಕಾಲುಮುಖ ತೊಳೆದು, ಶುಭ್ರ ವಸ್ತ್ರ ಧರಿಸಿ, ಹಣೆಗೆ ಭಸ್ಮ / ಗಂಧ / ಕುಂಕುಮ ಹಚ್ಚಿ ಪೂಜೆ ಶುರುಮಾಡುವದು. ಬೆಳಿಗ್ಗೆ ತೊಳೆದು ಒಣಗಿಸಿದ ಹತ್ತಿಯ ಪಂಚೆ, ಹೆಗಲು ಶಲ್ಯ ಉಟ್ಟುಕೊಳ್ಳುವದು ರೂಢಿ. ಸಾಯಂಕಾಲ ನಾರು ಮಡಿ, ಶಲ್ಯ ಉಟ್ಟುಕೊಳ್ಳುವದು ರೂಢಿ. ಸಂಧ್ಯಾವಂದನೆ ಇತರ ನಿತ್ಯಕರ್ಮಗಳನ್ನು ಮುಗಿಸಿ ಪೂಜೆ ಶುರುಮಾಡುವದು. ಪ್ರತಿದಿನ ಬೆಳಿಗ್ಗೆ ದೇವರ ಮಂಟಪವನ್ನು ಮತ್ತು ಪೂಜಾ ಪರಿಕರಗಳನ್ನು ಶುಚಿ ಗೊಳಿಸಿಕೊಳ್ಳುವದು ರೂಢಿ. ದೇವರ ಮಂಟಪವನ್ನು ಪೂರ್ವಾಭಿಮುಖವಾಗಿ ಇರಿಸಿ, ಪೂಜೆಮಾಡುವವರು ಮಂಟಪದ ಬಲಕ್ಕೆ ಉತ್ತರಾಭಿಮುಖವಾಗಿ ಪೂಜೆಗೆ ಕುಳಿತುಕೊಳ್ಳುವುದು ಸರ್ವ ಶ್ರೇಷ್ಠ. ದೇವರಾಗಲೀ, ಪೂಜೆಮಾಡುವವರಾಗಲೀ ದಕ್ಷಿಣಕ್ಕೆ ಮುಖ ಮಾಡಿ ಕುಳಿತು ಪೂಜೆ ಮಾಡುವ ಕ್ರಮ ಇಲ್ಲ - ಕಾರಣ - ಅದು ಯಮಧರ್ಮನ ಲೋಕದ ದಿಕ್ಕು ಮತ್ತು ಎಲ್ಲಾ ಅಪರಕಾರ್ಯಗಳನ್ನು ಮಾತ್ರ ದಕ್ಷಿಣಕ್ಕೆ ಮುಖ ಮಾಡಿ ಕುಳಿತು ಪೂರೈಸಬೇಕು.

ಪೂಜೆಗೆ ಬೇಕಾದ ಎಲ್ಲಾ ಸಾಹಿತ್ಯವನ್ನು ಸಜ್ಜುಗೊಳಿಸಿಕೊಂಡು ಶಾಂತ ಚಿತ್ತರಾಗಿ ಪತ್ನಿಯ ಸಮೇತರಾಗಿ ಚಾಪೆ/ಮಣೆಯ ಮೇಲೆ ಕುಳಿತುಕೊಳ್ಳಿ. ನಿಮ್ಮ ಪತ್ನಿ ನಿಮ್ಮ ಬಲಗಡೆ ಕುಳಿತುಕೊಳ್ಳಲಿ. ಒಂದು ದೀಪವನ್ನು ಹಚ್ಚಿ ದೇವರ ಎಡಭಾಗದಲ್ಲಿ ಇಟ್ಟು ಪೂಜೆಪ್ರಾರಂಭಿಸಿ.

## 3.2 ಪೂಜಾ ಸಾಮಗ್ರಿ

ಸಾಮನ್ಯವಾಗಿ ಎಲ್ಲ ಪೂಜೆಗಳಿಗೂ ಉಪಯೋಗಿಸುವ ಸಾಮಗ್ರಿಗಳು:

ದೇವರಮಣೆ / ಮಂಟಪ, ದೇವರ ವಿಗ್ರಹ, ದೇವರ ಪಟ, ಘಂಟೆ, ಆರತಿತಟ್ಟೆ, ಪಂಚಪಾತ್ರೆ, ಉದ್ಧರಣೆ, ಅರ್ಘ್ಯ ಪಾತ್ರೆ, ಚಂಬು, ಕೊಡ, ನೀರು, ಅಭಿಷೇಕ ಪಾತ್ರೆ, ಗಿಂಡಿ, ಜಾಗಟೆ, ತಾಳ, ಶಂಖ.

ರಂಗೋಲಿ, ಅರಿಶಿನ, ಅರಿಶಿನದ ಕೊಂಬು, ಕುಂಕುಮ, ಅಕ್ಷತೆ, ಗಂಧ, ಭಸ್ಮ, ಊದಿನ ಕಡ್ಡಿ, ಕರ್ಪೂರ, ಮಂಗಳಾರತಿ ಬತ್ತಿ, ನಂದಾ ದೀಪ, ದೀಪದ ಕಂಭ, ತುಪ್ಪ, ಎಣ್ಣೆ, ದೀಪಕ್ಕೆ ಹಾಕುವ ಹತ್ತಿ ಬತ್ತಿ, ಜನಿವಾರ.

ಹೂವು, ಪತ್ರೆ, ದೂರ್ವೆ, ತುಲಸಿ, ದರ್ಬೆ, ವೀಳ್ಯದ ಎಲೆ, ಅಡಿಕೆ, ಐದು ತರಹದ ಹಣ್ಣುಗಳು, ತೆಂಗಿನಕಾಯಿ, ಬಾಳೆಹಣ್ಣು.

ತೋರಣ - ಮಾವಿನಸೊಪ್ಪು, ಬಾಳೆ ಕಂದು

ಪಂಚಾಮೃತ - ಹಾಲು, ಮೊಸರು, ಸಕ್ಕರೆ, ತುಪ್ಪ, ಜೇನುತುಪ್ಪ

ಪಂಚಗವ್ಯ – ಗೋಮಯ, ಗೋಮೂತ್ರ, ಹಾಲು, ಮೊಸರು, ತುಪ್ಪ,

ಕೂತುಕೊಳ್ಳಲು ಚಾಪೆ, ನಾಣ್ಯಗಳು.

## 3.3 ಪೂಜಾ ಕ್ರಮ

ದ್ವಿರಾಚಮನ, ಆಚಮನ ಶೇಷ, ಪವಿತ್ರಂ ಧೃತ್ವಾ, ಪ್ರಾಣಾಯಾಮ, ಘಂಟಾರ್ಚನ, ಪ್ರಾರಂಭಕಾಲ ಸಕಲ ದೇವತಾ ಪ್ರಾರ್ಥನ, ದೇಶಕಾಲ, ಸಂಕಲ್ಪ,

ನಿರ್ವಿಘ್ನ ಗಣಪತಿ ಪೂಜಾ, ಕ್ಷೇತ್ರಪಾಲ ವಾಸ್ತೋಷ್ಪತಿ ಪ್ರಾರ್ಥನ, ಕರ್ಮಣಃ ಪುಣ್ಯಾಹ ವಾಚನ, ಋತ್ವಿಜ ವರ್ಣನ,

ಭೂಶುದ್ಧಿ, ಭೂತೋತ್ಸಾರಣ, ಭೈರವ ಪ್ರಾರ್ಥನಾ, ಆಸನ ಶುದ್ಧಿ, ಶಿಖಾ ಬಂಧ, ಕಲಶಾರ್ಚನ, ಶಂಖಾರ್ಚನ, ಆತ್ಮಾರ್ಚನ, ಮಂಟಪಾರ್ಚನ,

ದ್ವಾರಪಾಲ ಪೂಜಾ, ಪೀಠ ಪೂಜಾ, ಕಲಶಸ್ಥಾಪನ, ವರುಣಪುಜಾ, ನವಶಕ್ತಿ ಪೂಜಾ,

ಧ್ಯಾನ, ಆವಾಹನ, ಪ್ರಾಣಪ್ರತಿಷ್ಠಾ, ಮಂತ್ರನ್ಯಾಸ, ಮೂಲಮಂತ್ರಜಪ, ಆವಾಹನಾರ್ಥಅರ್ಘ್ಯ, ಪಂಚೋಪಚಾರ ಪೂಜಾ,

ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ, ಸ್ನಾನ, (ಮಲಾಪಕರ್ಷಣ ಸ್ನಾನ, ಪಂಚಾಮೃತಾಭಿಷೇಕ ಸ್ನಾನ, ಮಹಾಭಿಷೇಕ ಸ್ನಾನ) ಪುನರಾಚಮನ,

ಅಲಂಕಾರ ಪೂಜಾ (ವಸ್ತ್ರಯುಗ್ಮ, ಉಪವೀತ, ಆಭರಣ, ಗಂಧ, ಅಕ್ಷತ, ಪುಷ್ಪ) (ಸ್ತ್ರೀ ದೇವತೆಗಳಿಗೆ – ವಸ್ತ್ರ, ಕಂಚುಕ, ಹರಿದ್ರಾ, ಕುಂಕುಮ, ಮಂಗಲಸೂತ್ರ, ಮುಂತಾದವನ್ನು ಅರ್ಪಿಸಬಹುದು) (ಸನ್ಯಾಸಿಗಳಿಗೆ ದಂಡ, ಕಮಂಡಲು, ಪಾದುಕೆ, ಭಸ್ಮ, ರುದ್ರಾಕ್ಷ ಮುಂತಾದವನ್ನು ಅರ್ಪಿಸಬಹುದು)

ಅಂಗ ಪೂಜಾ, ಆವರಣ ಪೂಜಾ, ಪತ್ರ ಪೂಜಾ, ಪುಷ್ಪ ಪೂಜಾ, (ದೇವತಾ ಸಂಭಂಧಿ ವಿಶಿಷ್ಠ ಪೂಜೆಗಳನ್ನು ಇಲ್ಲಿ ಮಾಡಬಹುದು. ಉದಾ – ಶಿವನಿಗೆ ಬಿಲ್ವಾರ್ಚನೆ, ದುರ್ಗಾಂಬಿಕೆಗೆ ಕುಂಕುಮಾರ್ಚನೆ, ಗಣಪತಿಗೆ ದುರ್ವಾರ್ಚನೆ, ವಿಷ್ಣುವಿಗೆ ತುಳಸಿಅರ್ಚನೆ )

ದ್ವಾದಶ ನಾಮ ಪೂಜಾ, ಅಷ್ಟೋತ್ತರ ಶತನಾಮ ಪೂಜಾ, ಸಹಸ್ರನಾಮ ಪೂಜಾ,

ಜಪ, ಪಾರಾಯಣ, ಹೋಮ, ತರ್ಪಣ, ಬಲಿಹರಣ, ಮಾರ್ಜನ

ಉತ್ತರಪೂಜಾ - ಧೂಪ, ದೀಪ ನೈವೇದ್ಯ, ಫಲ ಸಮರ್ಪಣೆ, ತಾಂಬೂಲ, ಸುವರ್ಣಪುಷ್ಪದಕ್ಷಿಣಾ, ಮಹಾಮಂಗಳಾರತಿ, ಮಂತ್ರಪುಷ್ಪ, ಪ್ರದಕ್ಷಿಣ, ನಮಸ್ಕಾರ, ಪ್ರಸನ್ನ ಅರ್ಘ್ಯ

ರಾಜೋಪಚಾರಪೂಜಾ - ಪಲ್ಲಕ್ಕಿಉತ್ಸವ, ರಥೋತ್ಸವ, ಅಷ್ಟಾವಧಾನ ಸೇವೆ

ಪ್ರಾರ್ಥನಾ, ಪೂಜಾ ಸಮರ್ಪಣ, ಬ್ರಾಹ್ಮಣ ಪೂಜನ, ದಾನಾದಿಗಳು (ವಾಯನದಾನ, ಗೋದಾನ, ದಕ್ಷಿಣಾದಾನ, ಭೂದಾನ, ವಸ್ತ್ರದಾನ) ದೇವತಾಉದ್ವಾಸನ, ತೀರ್ಥಪ್ರೋಕ್ಷಣ, ತೀರ್ಥಪ್ರಸಾದಗ್ರಹಣ, ಕಲಶದಾನ, ಹಸ್ತೋದಕ, ಭೋಜನ, ಆಶೀರ್ವಾದಗ್ರಹಣ.

**ಅಭಿಷೇಕ ಸೂಕ್ತಗಳು** - ಗಣೇಶ ಅಥರ್ವಶೀರ್ಷ, ದುರ್ಗಾ ಸೂಕ್ತ, ಶ್ರೀ ಸೂಕ್ತ, ದೇವಿ ಸೂಕ್ತ, ಶ್ರೀ ರುದ್ರಾಧ್ಯಾಯಃ, ಪುರುಷ ಸೂಕ್ತ

**ಹೆಚ್ಚಿನ ಸೂಕ್ತಗಳು** - ಸೂರ್ಯ ಸೂಕ್ತ, ಗಣೇಶ ಸೂಕ್ತ, ದೇವಿ / ಅಂಭ್ರಣಿ ಸೂಕ್ತ, ಸರಸ್ವತಿ ಸೂಕ್ತ, ಮೇಧಾ ಸೂಕ್ತ, ಶ್ರದ್ಧಾ ಸೂಕ್ತ, ನೀಳಾ ಸೂಕ್ತ, ಭೂ ಸೂಕ್ತ, ವಿಷ್ಣು ಸೂಕ್ತ, ಮಹಾನಾರಾಯಣ ಸೂಕ್ತ, ನಾರಾಯಣೋಪನಿಷತ್, ಭಾಗ್ಯ (ಪ್ರಾತಃ) ಸೂಕ್ತ,

----- ****** -----

# 4 ಶಾಂತಿಗಳು

ಒಬ್ಬ ವ್ಯಕ್ತಿಗಾಗಿ ಮಾಡುವ ವೈದಿಕ ಪೂಜಾ ವಿಧಾನಕ್ಕೆ ಶಾಂತಿ ಎನ್ನುತ್ತಾರೆ. ಯಾವ ಕಾರಣಕ್ಕಾಗಿ ಯಾವ ಶಾಂತಿಯನ್ನು ಮಾಡಬೇಕು? ಮಗುವಿನ ಜನನ ಕಾಲದಲ್ಲಿ, ಗ್ರಹಗಳ ಸಂಧಿಕಾಲದಲ್ಲಿ, ಮರಣ ಕಾಲದಲ್ಲಿ ನಾನಾವಿಧ ದೋಷಾದಿಗಳು ಬರುತ್ತವೆ. ಇದನ್ನು ಗುರುಗಳ ಮುಖೇನ ತಿಳಿದು ಬಂದಿರುವ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಕೊಳ್ಳಬೇಕು.

## 4.1 ಜನನ ಶಾಂತಿಗಳು

1. **ಕೃಷ್ಣಚತುರ್ದಶಿ ಜನನ ಶಾಂತಿ -** ಮಗು ಕೃಷ್ಣ ಪಕ್ಷದ ಚತುರ್ದಶಿಯ ದಿನ ಜನನವಾದಲ್ಲಿ ಅನೇಕವಾದ ಅನಿಷ್ಠ ಫಲಗಳು ಬರುತ್ತದೆ. ಚತುರ್ದಶಿ ತಿಥಿಯ ಕಾಲವನ್ನು ಆರು ಭಾಗ ಮಾಡಿ ಒಂದನೇಯ ಭಾಗವನ್ನು ಶುಭ ಎಂತಲೂ, ಎರಡನೇಯ ಭಾಗವನ್ನು ತಂದೆಗೆ ಅನಿಷ್ಠ ಎಂತಲೂ, ಮೂರನೇಯ ಭಾಗವನ್ನು ತಾಯಿಗೆ ಅನಿಷ್ಠ ಎಂತಲೂ, ನಾಲ್ಕನೇಯ ಭಾಗವನ್ನು ಮಾವನಿಗೆ ಅನಿಷ್ಠ ಎಂದೂ, ಐದನೇಯ ಭಾಗವನ್ನು ವಂಶನಾಶ ಎಂತಲೂ, ಆರನೇಯ ಭಾಗವನ್ನು ಧನಹಾನಿ ಎಂದೂ ಶಾಸ್ತ್ರದಲ್ಲಿ ಹೇಳಿದೆ.
2. **ಸಿನೀವಾಲೀ-ಕುಹೂ ಜನನ ಶಾಂತಿ -** ಮಗುವು ಅಮವಾಸ್ಯೆಯ ದಿನದಂದು ಜನಿಸಿದಲ್ಲಿ, ಅಮವಾಸ್ಯೆಯ ಪರಮಘಟಿಯನ್ನು 8 ಭಾಗವನ್ನು ಮಾಡಿ ಪ್ರಥಮ ಭಾಗ ಜನನಕ್ಕೆ ಸಿನೀವಾಲೀ, ಅಷ್ಟಮ ಭಾಗಕ್ಕೆ ಕುಹೂ ಜನನ ಎಂದೂ ಕರೆಯುತ್ತಾರೆ. ಈ ಜನನದಲ್ಲಿ ಬರುವ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಸಿಕೊಳ್ಳಬೇಕು.
3. **ದರ್ಶ ಜನನ ಶಾಂತಿ -** ಅಮವಾಸ್ಯೆ ತಿಥಿಯ ಪರಮಘಟಿಯನ್ನು 8 ಭಾಗವನ್ನಾಗಿ ಮಾಡಿದಾಗ 2ನೇಯ ಭಾಗದಿಂದ 6ನೇ ಭಾಗದವರೆಗೆ ಹುಟ್ಟಿದ ಮಗುವಿಗೆ ಬರುವ ದೋಷ ನಿವಾರಣೆಗೆ ದರ್ಶ ಜನನ ಶಾಂತಿ ಅಥವಾ ಅಮವಾಸ್ಯೆ ಜನನ ಶಾಂತಿ ಮಾಡಿಸಿಕೊಳ್ಳಬೇಕು.

4. **ಸೂರ್ಯ ಸಂಕ್ರಾಂತಿ ಜನನ ಶಾಂತಿ ಮತ್ತು ವ್ಯತಿಪಾತ, ವೈದ್ರತಿ, ಅತೀಗಂಡ, ಗಂಡಯೋಗ ಜನನ ಶಾಂತಿ** - ಮಗುವು ಮೇಲೆ ಕಾಣಿಸಿದ ಕಾಲದಲ್ಲಿ ಜನಿಸಿದರೆ ಅದರ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಸಿಕೊಳ್ಳಬೇಕು.
5. **ಆಶ್ಲೇಷಾ ಜನನ ಶಾಂತಿ** - ಮಗುವು ಆಶ್ಲೇಷಾ ನಕ್ಷತ್ರ ಇರುವ ಸಮಯದಲ್ಲಿ ಜನಿಸಿದರೆ ದೋಷಾದಿಗಳ ನಿವಾರಣೆಗೆ ಶಾಂತಿಗಳನ್ನು ಮಾಡಿಸಿಕೊಳ್ಳಬೇಕು. ಮೊದಲನೇ ಪಾದ ಜನನಕ್ಕೆ ಶುಭ ಫಲ, ದ್ವಿತೀಯ ಪಾದ ಜನನಕ್ಕೆ ಧನನಾಶ, ತೃತೀಯ ಪಾದ ಜನನಕ್ಕೆ ತಾಯಿಗೆ ಅನಿಷ್ಠ.
6. **ಜ್ಯೇಷ್ಠ ನಕ್ಷತ್ರ ಜನನ ಶಾಂತಿ** - ಮಗುವು ಜ್ಯೇಷ್ಠ ನಕ್ಷತ್ರ ಇರುವ ಸಮಯದಲ್ಲಿ ಜನಿಸಿದರೆ ದೋಷಾದಿಗಳ ನಿವಾರಣೆಗೆ ಶಾಂತಿಗಳನ್ನು ಮಾಡಿಸಿಕೊಳ್ಳಬೇಕು. ವಿಶೇಷತಃ 4ನೇ ಪಾದದಲ್ಲಿ ಜನಿಸಿದರೆ ತಂದೆ-ತಾಯಿಗೆ ಅನಿಷ್ಠ.
7. **ಮೂಲಾ ನಕ್ಷತ್ರ ಜನನ ಶಾಂತಿ** - ಮಗುವು ಮೂಲಾ ನಕ್ಷತ್ರ ಇರುವ ಸಮಯದಲ್ಲಿ ಜನಿಸಿದರೆ 1ನೇ ಪಾದಕ್ಕೆ ಅತೀ ಅನಿಷ್ಠ. 2ನೇ ಪಾದಕ್ಕೆ ತಾಯಿಗೆ ಅನಿಷ್ಠ. 3ನೇ ಪಾದಕ್ಕೆ ಧನನಾಶ. 4ನೇ ಪಾದಕ್ಕೆ ಕುಲನಾಶ. ಹೆಣ್ಣು ಮಗು ಈ ನಕ್ಷತ್ರದಲ್ಲಿ ಜನಿಸಿದರೆ ಗಂಡನ ತಂದೆಗೆ ಅತೀ ಅನಿಷ್ಠ.
8. **ಗ್ರಹಣ ಜನನ ಶಾಂತಿ** - ಮಗುವು ಸೂರ್ಯ ಅಥವಾ ಚದ್ರ ಗ್ರಹಣ ಕಾಲದಲ್ಲಿ ಜನಿಸಿದರೆ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಸಿಕೊಳ್ಳಬೇಕು.
9. **ಏಕ ನಕ್ಷತ್ರ ಜನನ ಶಾಂತಿ** - ತಾಯಿ, ತಂದೆ, ಅಣ್ಣ-ತಮ್ಮ ಎಲ್ಲರ ನಕ್ಷತ್ರ ಒಂದೇ ಆದಲ್ಲಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
10. **ವಿಷ ಘಟಿ ಜನನ ಶಾಂತಿ** - ಮಗುವು ವಿಷ ನಾಡಿಯಲ್ಲಿ ಜನಿಸಿದರೆ ಸರ್ವರಿಷ್ಠ. ಆದ್ದರಿಂದ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
11. **ತ್ರಿಕ ಪ್ರಸವ ಶಾಂತಿ** - ತಾಯಿಗೆ ಏಕ ಕಾಲದಲ್ಲಿ ಮೂರು ಮಗುವಿನ ಜನನವಾದರೆ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
12. **ಭದ್ರಾ ಜನನ ಶಾಂತಿ** - ಭದ್ರ ಯೋಗದಲ್ಲಿ ಜನಿಸಿದ ಮಗುವಿಗೆ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

13. **ಅಧೋಮುಖ ಜನನ ಶಾಂತಿ** - ಮಗು ಜನಿಸುವಾಗ ಕೆಳಮುಖವಾಗಿ ಜನಿಸಿದರೆ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
14. **ಸದಂತ ಜನನ ಶಾಂತಿ** - ಮಗು ಹುಟ್ಟಿದಾಗಲೇ ಹಲ್ಲು ಇದ್ದರೆ ಬರುವ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
15. **ಯಮಳ ಜನನ ಶಾಂತಿ** - ಏಕ ಕಾಲದಲ್ಲಿ ಎರಡು ಮಗುವಿನ ಜನನವಾದಲ್ಲಿ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
16. **ಪ್ರಸವ ವೈಕೃತಿ ಜನನ ಶಾಂತಿ** - ಮಗು ಜನಿಸುವಾಗ ಅಂಗ ವಿಕಲವಿದ್ದಲ್ಲಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
17. **ದಿನ ಕ್ಷಯ, ವ್ಯತಿಪಾತ ಯೋಗಾದಿ ಜನನ ಶಾಂತಿ**
18. **ಬಾಲಾರಿಷ್ಠ ಜನನ ಶಾಂತಿ** - ಮಗು ಜನಿಸಿದಾಗ ಜನ್ಮದಲ್ಲಿ ರವಿ, ಕುಜ, ಶನಿ, ರಾಹು, ಕೇತುಗಳು ವಿಷಮ ಸ್ಥಿತವಾದಲ್ಲಿ ವಿಪರೀತ ಕಷ್ಟಗಳನ್ನು ಕೊಡುತ್ತದೆ. ಈ ಕಷ್ಟಗಳ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಕೊಳ್ಳಬೇಕು. ಈ ಶಾಂತಿಯನ್ನು ಮಗುವಿನ ಜನ್ಮದ ನಂತರದ 12ನೆ ದಿನದ ಮೇಲೆ ಮಗು ಚಿಕ್ಕದಿದ್ದಾಗಲೆ ಮಾಡಿಕೊಳ್ಳುವುದು ಒಳ್ಳೆಯದು.
19. **ಅರಿಷ್ಟತ್ರಯ ಶಾಂತಿ** - ಮಗು ಜನಿಸಿದಾಗ ವಿಷಮ ಸ್ಥಾನ ಸ್ಥಿತರಾದ ಗ್ರಹದಿಂದ ಬರುವ ದೋಷ ನಿವಾರಣೆಗಾಗಿ ಈ ಶಾಂತಿ ಅಗತ್ಯ.
20. **ಪಂಚಮಾರಿಷ್ಟ ಶಾಂತಿ** - ಮಗು ಜನಿಸಿದಾಗ ಜನ್ಮ ಲಗ್ನ-ರಾಶಿಯಿಂದ ಪಂಚಮದಲ್ಲಿ ರವಿ ಇದ್ದರೆ ತಂದೆಗೆ ಅನಿಷ್ಠ, ಶನಿ ಇದ್ದರೆ ತಾಯಿಗೆ ಅನಿಷ್ಠ, ಕುಜ ಇದ್ದರೆ ಸಹೋದರನಿಗೆ, ಚಂದ್ರ ಇದ್ದರೆ ಮಾವನಿಗೆ, ಗುರುವಿದ್ದರೆ ತಾಯಿಯ ತಂದೆಗೆ, ಶುಕ್ರನಿದ್ದರೆ ಅಜ್ಜನಿಗೆ, ಶನಿ-ರಾಹುಗಳಿದ್ದರೆ ಮಗುವಿಗೆ ಹಾಗೂ ಕೇತುವಿದ್ದಲ್ಲಿ ಸಹೋದರನಿಗೆ ಅನಿಷ್ಠವಾದುದರಿಂದ ಈ ಶಾಂತಿಯ ಅವಶ್ಯಕತೆ ಇರುತ್ತದೆ.
21. **ಗೋಮುಖ ಪ್ರಸವ ಶಾಂತಿ** - ಮಗು ಜನಿಸಿದಾಗ ಬಂದಿರುವ ದಿನಕ್ಷಯ, ವ್ಯತೀಪಾತ-ವಾಘಾತ, ವಿಷ್ಠಿ-ಶೂಲ, ಗಂಡ-ಮೃತ್ಯು ಯೋಗ, ದಗ್ದಯೋಹ, ಆಶ್ಲೇಷ, ಜ್ಯೇಷ್ಠ, ಮೂಲಾ ನಕ್ಷತ್ರದಲ್ಲಿ ಜನಿಸಿದಾಗ ಎಲ್ಲಾ ದೋಷ

ನಿವಾರಣೆಗೆ ಈ ಶಾಂತಿಯನ್ನು ಮತ್ತು ಗೋ ಗರ್ಭ ಜನನವನ್ನು ಮಾಡಿ ಆಮೇಲೆ ಉಕ್ತವಾದ ಶಾಂತಿಯನ್ನು ಮಾಡಬೇಕು.

22. **ನಾಳವೇಷ್ಟನ ಶಾಂತಿ** - ಮಗುವಿನ ಜನನ ಸಮಯದಲ್ಲಿ ತಾಯಿಯಿಂದ ಮಗುವಿಗೆ ಆಹಾರಾದಿಗಳನ್ನು ಕೊಡುವ ನಾಳವು ಕಂಠ, ಕೈ, ಕಾಲುಗಳಿಗೆ ಸುತ್ತಿಕೊಂಡು ಜನಿಸಿದರೆ ತಂದೆ, ತಾಯಿಗೆ ಅನಿಷ್ಟ, ಸಂಪತ್ತು ನಾಶ, ಸರ್ವ ನಾಶ ಎಂದಿರುತ್ತದೆ. ಆದ್ದರಿಂದ ದೋಷ ನಿವಾರಣೆಗೆ ಈ ಶಾಂತಿಯನ್ನು ಮಾಡಬೇಕು.

23. **ವಿಶಾಖಾ ನಕ್ಷತ್ರ ಜನನ ಶಾಂತಿ** - ವಿಶೇಷವಾಗಿ ಮಗುವು ವಿಶಾಖಾ ನಕ್ಷತ್ರದ 4ನೇ ಚರಣದಲ್ಲಿ ಜನಿಸಿದರೆ ತಂದೆ, ತಾಯಿ, ಬಂಧುಗಳಿಗೆ ವಿವಾಹದ ನಂತರ ವರನ ಸಹೋದರರಿಗೂ ಅನಿಷ್ಟವಾದ್ದರಿಂದ ಶಾಂತಿಯ ಅಗತ್ಯವಿದೆ. 1, 2, 3, ಚರಣಗಳಿಗೆ ಅಗತ್ಯವಿಲ್ಲ.

24. **ಯೋನಿ ವೈಕೃತಿ ಶಾಂತಿ** - ಒಂದು ಹೆಣ್ಣು ಮಗಳು ಮೊದಲನೇ ಬಾರಿಗೆ ರಜೋದರ್ಶನವಾಗಿ (ಮಂತ್ಲಿ ಪಿರಿಯಡ್ಸ್) ನಂತರ 6 ತಿಂಗಳವರೆಗೆ ರಜೋದರ್ಶನವಾಗದಿದ್ದಲ್ಲಿ ಮುಂದೆ ಮದುವೆಯಾದ ಮೇಲೆ ಬರುವಂತಹ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

25. **ಬಾಲಮಾರ್ಕಾಂಡೇಯ ಶಾಂತಿ** - ಮಗುವಿಗೆ ಮಹತ್ ಬಾಲಾರಿಷ್ಟ ವಶದಿಂದ ಆಯುಷ್ಯಕ್ಕೆ ಕಂಟಕ ಸೂಚಿಸಿದಲ್ಲಿ ಅನಿಷ್ಟ ಪರಿಹಾರಕ್ಕಾಗಿ ಈ ಶಾಂತಿಯನ್ನು ಮಾಡಿಸಬೇಕು.

26. **ರೋಹಿಣಿ ನಕ್ಷತ್ರ ಜನನ ಶಾಂತಿ** - ಮಗುವು ರೋಹಿಣಿ ನಕ್ಷತ್ರದಲ್ಲಿ ಜನಿಸಿದರೆ ಮಾವನಿಗೆ ಅರಿಷ್ಟ ಸೂಚನೆಯಾಗುವುದರಿಂದ ಈ ಶಾಂತಿಯನ್ನು ಮಾಡಿಸಬೇಕು.

27. **ಬಾಲಗ್ರಹ ಶಾಂತಿ** ಮಗುವು ಪೂರ್ವ ಜನ್ಮಾಂತರದಲ್ಲಿ ಮಾಡಿದ ದೇವರ, ವೇದಗಳ, ಶಾಸ್ತ್ರಗಳ ಮತ್ತು ಗುರು ಹಿರಿಯರ ನಿಂದನಾದಿ ಸರ್ವ ಪಾತಕಗಳಿಂದ ಬರುವ ಪೀಡಾ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

## 4.2 ಗ್ರಹಚಾರ ಶಾಂತಿಗಳು

1. **ಕುಜ-ರಾಹು ಸಂಧಿ ಶಾಂತಿ** - ನವಗ್ರಹದಲ್ಲಿ ಒಂದೊಂದು ಗ್ರಹಕ್ಕೆ ಇಷ್ಟು ವರ್ಷಗಳು ಮನುಷ್ಯನ ಜೀವನದಲ್ಲಿ ಅಧಿಪತ್ಯ (ಅಧಿಕಾರ) ಎಂದಿರುತ್ತದೆ. ಆದರೆ ಪರಸ್ಪರ ಶತ್ರು ಗ್ರಹಗಳ ಅಧಿಕಾರ ಅವಧಿ ಮುಗಿದು ಇನ್ನೊಂದು ಶತ್ರು ಗ್ರಹದ ಅಧಿಕಾರ ಆರಂಭ ಕಾಲದಲ್ಲಿ 6 ತಿಂಗಳು ಮುಂಚಿತವಾಗಿ ಸಂಧಿ ಶಾಂತಿ ಮಾಡಿಸುತ್ತಾರೆ. ಇಲ್ಲಿ ಕುಜ ದಶಾ 7 ವರ್ಷಗಳು ಮುಗಿದು ರಹು ದಶಾ 18 ವರ್ಷಗಳು ಆರಂಭವಾಗುವ ಸಮಯಕ್ಕೆ ಈ ಶಾಂತಿಯನ್ನು ಮಾಡಿಸಬೇಕು. ಈ ಸಂಧಿ ಕಾಲ ವಿಶೇಷವಾಗಿ ಗಂಡಸರಿಗಿಗೆ ಹೆಚ್ಚು ಹಾನಿಕಾರಕವಾಗಿರುತ್ತದೆ. ಆಯುಷ್ಯದಲ್ಲಿ ಇದು ಒಂದು ಕಂಟಕ ಎನ್ನಬಹುದು.
2. **ರಾಹು-ಬೃಹಸ್ಪತಿ ಸಂಧಿ ಶಾಂತಿ** - ರಾಹುವಿನ ಅಧಿಕಾರ ಅವಧಿ 18 ವರ್ಷಗಳು ಕಳೆದು ಗುರುವಿನ 16 ವರ್ಷದ ಅಧಿಕಾರದ ಅವಧಿ ಆರಂಭವಾಗುವ 6 ತಿಂಗಳು ಮೊದಲು ಈ ಶಾಂತಿಯನ್ನು ಅಗತ್ಯವಾಗಿ ಮಾಡಿಸಿಕೊಳ್ಳಬೇಕು. ಈ ಸಂಧಿಕಾಲವು ವಿಶೇಷವಾಗಿ ಮಹಿಳೆಯರಿಗೆ ಹೆಚ್ಚು ಹಾನಿಕಾರಕವಾಗಿರುತ್ತದೆ.
3. **ಶುಕ್ರಾದಿತ್ಯ ಸಂಧಿ ಶಾಂತಿ** - ಶುಕ್ರನ ಅಧಿಕಾರ ಅವಧಿ 20 ವರ್ಷಗಳು ಕಳೆದು ಸೂರ್ಯನ 6 ವರ್ಷದ ಅಧಿಕಾರದ ಅವಧಿ ಆರಂಭವಾಗುವ 6 ತಿಂಗಳು ಮೊದಲು ಈ ಶಾಂತಿಯನ್ನು ಅಗತ್ಯವಾಗಿ ಮಾಡಿಸಿಕೊಳ್ಳಬೇಕು. ಈ ಸಂಧಿಕಾಲವು ಪುರುಷ ಮತ್ತು ಮಹಿಳೆಯರಿಬ್ಬರಿಗೂ ಹಾನಿಕಾರಕವಾಗಿರುತ್ತದೆ.

## 4.3 ವಯೋಮಾನ ಶಾಂತಿಗಳು

1. **ವೈಷ್ಣವೀಶಾಂತಿ –** ವ್ಯಕ್ತಿಯು 50ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.
2. **ವಾರುಣೀಶಾಂತಿ** - ವ್ಯಕ್ತಿಯು 55ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.
3. **ಷಷ್ಟ್ಯಬ್ಧ ಅಥವಾ ಉಗ್ರರಥ ಶಾಂತಿ** - ಮನುಷ್ಯನು ತನ್ನ ಜೀವನದ ಕಷ್ಟ-ಸುಖಗಳನ್ನು ಅನುಭವಿಸುತ್ತ ಸಕಾಲದಲ್ಲಿ ವಿವಾಹವಾಗಿ ಪತ್ನಿಯನ್ನೊಡಗೂಡಿ

ಮಕ್ಕಳ ಆಗು ಹೋಗುಗಳನ್ನು ಪೂರೈಸುತ್ತ ತನ್ನ ಜೀವನದ 60ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು. ಇದನ್ನು ಎಕೆ ಮಾಡಬೇಕು? ಇದನ್ನು ಮುಂದಿನ ಜೀವನದಲ್ಲಿ ಬರುವಂತಹ ಅಪಮೃತ್ಯು, ದುಃಸ್ವಪ್ನ ದರ್ಶನ, ಗೃಹಪೀಡೆ, ವಿವಿಧ ರೋಗಬಾದೆ, ಛಾಯಾವಿಕೃತಿ. ಭೂತ-ಪ್ರೇತಾದಿ ಪೀಡಾರೂಪಕವಾದಂತಹ ನಾನಾವಿಧ ಅರಿಷ್ಟ ನಿವಾರಣೆಗಾಗಿ ಮಾಡುವಂತಹ ಶಾಂತಿಯನ್ನು ಉಗ್ರರಥ ಶಾಂತಿ ಎನ್ನುತ್ತೇವೆ. ಈ ವಿಧಿಯಲ್ಲಿ ಗಣಪತಿ, ನವಗ್ರಹದೇವತೆಗಳನ್ನು, ಪೀಡಾಪರಿಹಾರಕನಾದ ಮೃತುಂಜಯನನ್ನು, ಅಶ್ವತ್ಥಾಮಾದಿ ಸಪ್ತ ಚಿರಂಜೀವಿಗಳನ್ನು, ಮೃತ್ಯುವನ್ನೇ ಜಯಿಸಿದ ಮಾರ್ಕಂಡೆಯನನ್ನು, ಆಯುರ್ದೇವತೆ ನಕ್ಷತ್ರದೇವತೆಗಳನ್ನು ಆರಾಧಿಸಬೇಕು. ಜಪ, ಹೋಮ, ತರ್ಪಣ, ಮಾರ್ಜನ, ಬ್ರಾಹ್ಮಣ ಭೋಜನವನ್ನಾಚರಿಸಿ ಗುರು-ಹಿರಿಯರ ಆಶೀರ್ವಾದವನ್ನು ಪಡೆಯಬೇಕು. ಈ ವಿಧಿಯಲ್ಲಿ ಉಗ್ರನೆಂಬ ಹೆಸರಿನ ಮೃತ್ಯುಂಜಯನು ಪ್ರಧಾನದೇವತೆಯಾದ್ದರಿಂದ ಉಗ್ರರಥ ಶಾಂತಿ ಎಂಬ ಹೆಸರು ಬಂತು. ಈ ವಿಧಿಯ ಅಂತ್ಯದಲ್ಲಿ ಕಲಶ ತೀರ್ಥಸ್ನಾನ ಮತ್ತು ಮಂಗಳದ್ರವ್ಯ ದರ್ಶನ ಅಲ್ಲದೇ ಪುನಃ ಮಂಗಳ ಸೂತ್ರ ಕಟ್ಟುವುದು ಮುಖ್ಯವಾಗಿರುತ್ತದೆ.

4. **ಮಹಾಪಥಶಾಂತಿ** - ವ್ಯಕ್ತಿಯು 65ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.
5. **ಭೀಮರಥ ಶಾಂತಿ** - ಈ ಶಾಂತಿಯನ್ನು ಜನ್ಮಕಾಲ ಮೊದಲುಗೊಂಡು 70ನೇ ವರ್ಷವನ್ನು ಪ್ರವೇಶಿಸಿದಾಗ ಜನ್ಮಮಾಸ, ಜನ್ಮ ನಕ್ಷತ್ರದಲ್ಲಿ ಸಕಲಪೀಡಾಪರಿಹಾರಕ್ಕಾಗಿ ಮಾಡಬೇಕು. ಈ ವಿಧಿಯನ್ನು ವರ್ತಮಾನದಲ್ಲಿ ದೇಹದಲ್ಲಿ ಅಡಕವಾಗಿರುವ ವಾತ, ಪಿತ್ತ, ಕಫಾದಿ ನಾನಾವಿಧಧ ರೋಗಪೀಡಾ ಪರಿಹಾರಕ್ಕಾಗಿ ಅಲ್ಲದೆ ಮುಂದೆ ಬರುವಂತಹ ನಾನಾವಿಧ ಘೋರ ವಿಪತ್ಯಾದಿ ಸರ್ವಾರಿಷ್ಟ ನಿವಾರಣೆಗಾಗಿ ಆಯುಷ್ಯ, ಆರೋಗ್ಯ, ಆನಂದ ಪ್ರಾಪ್ತಿಗಾಗಿ ಈ ಶಾಂತಿಯನ್ನು ವಿಧಿಯುಕ್ತವಾಗಿ ಆಚರಿಸಿಕೊಳ್ಳಬೇಕು. ಈ ಶಾಂತಿ ಕ್ರಮದಲ್ಲಿ ಭೀಮ ಎಂಬ ಮಹಾ ಮೃತ್ಯುಂಜಯನು ಪ್ರಧಾನ ದೇವತೆಯಾದ್ದರಿಂದ ಇದನ್ನು

ಭೀಮರಥ ಶಾಂತಿ ಎನ್ನಲಾಗಿದೆ. ಈ ವಿಧಿಯಲ್ಲಿ ಭೀಮ ಮೃತ್ಯುಂಜಯ, ಬ್ರಹ್ಮ, ವಿಷ್ಣು, ಲೋಕಪಾಲ ದೇವತೆಗಳನ್ನು, ಸಪ್ತ ಚಿರಂಜೀವಿಗಳನ್ನು, ಗ್ರಹದೇವತೆಯನ್ನು, ಆಯುಷ್ಯ ನಕ್ಷತ್ರ ಆಯುರ್ದೇವತೆಯನ್ನು ವಿಶೇಷವಾಗಿ ಆರಾಧಿಸಿ ಜಪ, ಹೋಮ, ತರ್ಪಣ, ಮಾರ್ಜನ, ಬ್ರಾಹ್ಮಣ ಭೋಜನ ದಾನಾದಿಗಳನ್ನು ಮಾಡಿ ಗುರು-ಹಿರಿಯರ ಆಶೀರ್ವಾದವನ್ನು ಪಡೆಯಬೇಕು.

6. **ಐಂಧ್ರಿಶಾಂತಿ** - ವ್ಯಕ್ತಿಯು 75ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.
7. **ವಿಜಯರಥಿಶಾಂತಿ** - 78 - 81 ವಯಸ್ಸಿನಲ್ಲಿ ಈ ಶಾಂತಿಯನ್ನು ಮಾಡಬೇಕು.
8. **ಸಹಸ್ರಚಂದ್ರ ದರ್ಶನ ಅಥವಾ ಶತಾಭಿಷೇಕ** ಶಾಂತಿ - ಜನ್ಮ ಕಾಲ ಮೊದಲುಗೊಂಡು ಅಧಿಕಮಾಸಾದಿಗಳನ್ನು ಗಣನೆಗೆ ತೆಗೆದುಕೊಂಡು 80 ವರ್ಷ 8 ತಿಂಗಳು ಆದಾಗ ಮಾಡುವ ವಿಧಿಗೆ ಸಹಸ್ರಚಂದ್ರ ದರ್ಶನ ಎನ್ನುವರು. ಈ ವಿಧಿಯಲ್ಲಿ ಆದಿತ್ಯಾದಿ ನವಗ್ರಹ ದೇವತೆಗಳನ್ನು, ಆಯುರ್ದ್ರಾ ಅಗ್ನಿಯನ್ನು, ಬ್ರಹ್ಮ, ಪ್ರಜಾಪತಿ, ಪರಮೇಷ್ಟಿ, ಚತುರ್ಮುಖ, ಹಿರಣ್ಯ ಗರ್ಭ, ಅಗ್ನಿ, ಸೋಮ ಯಜ್ಞ ಆದಿ ದೇವತೆಗಳನ್ನು ಆರಾಧಿಸಿ ಜಪ, ಹೋಮ, ತರ್ಪಣ, ಮಾರ್ಜನ, ಬ್ರಾಹ್ಮಣ ಭೋಜನ ದಾನಾದಿಗಳನ್ನಾಚರಿಸಿ ಗುರು-ಹಿರಿಯರ ಆಶೀರ್ವಾದವನ್ನು ಪಡೆಯಬೇಕು. ಈ ಶಾಂತಿಯನ್ನು ವರ್ತಮಾನದಲ್ಲಿ ದೇಹ ಸ್ಥಿತ ಸಕಲ ಬಾಧೆ ನಿವಾರಣೆಗೊಳಿಸುವ ಪೂರ್ವಕ ಭವಿಷ್ಯತ್ತಿನಲ್ಲಿ ಬರುವ ರೋಗ ಪೀಡಾ, ಗ್ರಹ ಪೀಡೆ. ದೃಷ್ಟಿಮಾಂದ್ಯ, ಛಾಯಾವಿಕೃತಿ, ಭೂತ ಪ್ರೇತ ಪಿಶಾಚಾದಿ ಸಕಲ ಪೀಡೆ ನಿವಾರಣೆಗೋಸ್ಕರ ಅಕಾಲಬಾಧಾ ಪರಿಹಾರವಾಗಿ ಆಯುಷ್ಯ, ಆನಂದ, ಆರೋಗ್ಯ, ಸನ್ಮಂಗಲ, ಜ್ಞಾನ ವೈರಾಗ್ಯ ಪ್ರಾಪ್ತಿಗಾಗಿ ಈ ವಿಧಿಯನ್ನು ಆಚರಿಸುತ್ತಾರೆ.
9. **ರೌಧ್ರಿಶಾಂತಿ** – ವ್ಯಕ್ತಿಯು 85ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.
10. **ಸೌರಿಶಾಂತಿ** - ವ್ಯಕ್ತಿಯು 90ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.

11. **ಪರಿಶಿಷ್ಟಶಾಂತಿ** - ವ್ಯಕ್ತಿಯು 95ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.
12. **ಶತಾಭಿಷೇಕಶಾಂತಿ** - ವ್ಯಕ್ತಿಯು 100ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ, ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡಬೇಕು.

## 4.4 ಇತರ ಶಾಂತಿಗಳು

1. **ನವಗ್ರಹ ಶಾಂತಿ** – ನವಗ್ರಹಗಳನ್ನು ಸಂತೃಪ್ತಿಪಡಿಸಲು, ಗ್ರಹಗಳಿಂದ ಉಂಟಾಗುವ ದೋಷದ ನಿವೃತ್ತಿಗಾಗಿ, ಎಲ್ಲಾ ಶುಭಕಾರ್ಯಗಳಿಗೆ ಮುಂಚಿತವಾಗಿ, ಮನೆಯಲ್ಲಿ ಸಾಲದ ಬಾಧೆ, ಅಶಾಂತಿ, ಕೆಟ್ಟ ಕನಸು ಮತ್ತು ರೋಗ-ರುಜಿನಗಳಿಂದ ತೊಂದರೆ ಅನುಭವಿಸುತ್ತಿದ್ದಲ್ಲಿ ನವಗ್ರಹ ಶಾಂತಿಯನ್ನು ಮಾಡಿಸಿಕೊಳ್ಳಬೇಕು. "ದುಷ್ಟಾರಿಷ್ಟೇ ಸಮಾಯಾತೇ ಕರ್ತವ್ಯಂ ಗ್ರಹಶಾಂತಿಕಂ". ಈ ಗ್ರಹಾರಾಧನೆ ಸಾಮಾನ್ಯವಾಗಿ ಐದು ವಿಧ. ಪೂಜೆ, ಜಪ, ಸ್ತೋತ್ರ, ಅಧ್ವರ (ಹೋಮ), ದಾನ ಎಂಬುದಾಗಿ.
2. **ವಾಸ್ತು ಶಾಂತಿ** - ಹೊಸದಾಗಿ ತೆಗೆದುಕೊಂಡ ಮನೆ ಅಥವಾ ಪ್ಲಾಟ್ ನಿರ್ಮಿಸುವಾಗ ಸ್ಥಳದಲ್ಲಿರುವಂತಹ ನ್ಯೂನತೆಯನ್ನು ಹೊಗಲಾಡಿಸಿ ಸುಖ ಶಾಂತಿ, ಸಮೃದ್ಧಿಯಿಂದ ನೆಲೆಸುವುದಕ್ಕಾಗಿ ವಾಸ್ತು ಶಾಂತಿಯನ್ನು ಮಾಡುವುದು ಅಗತ್ಯ.
3. **ರಾಕ್ಷೋಘ್ನ ಶಾಂತಿ** - ಹೊಸಮನೆಯನ್ನು ನಿರ್ಮಿಸುವಾಗ ಸ್ಥಳದಲ್ಲಿ ಉಪಯೋಗಿಸಿರುವ ಮರದ ಸಲಕರಣೆಗಳಲ್ಲಿ ಇರುವ ಭೂತ, ಪ್ರೇತ ಪಿಶಾಚಿ ಬಾಧೆ ನಿವಾರಣೆಗಾಗಿ ವಾಸ್ತು ಹೋಮದ ಪೂರ್ವದಲ್ಲಿ ಈ ಹೋಮವನ್ನು ರಾತ್ರಿಯಲ್ಲಿ ಮಾಡಬೇಕು.
4. **ಗೇಹಾಭಿವೃದ್ಧಿ ಶಾಂತಿ** - ದೇವಸ್ಥಾನದಲ್ಲಿ ಸ್ಥಾಪಿಸಿರುವ ವಿಗ್ರಹಕ್ಕೆ ದೇವರ ಸಾನಿಧ್ಯ ಪ್ರಾಪ್ತಿಗಾಗಿ, ದೇವಾಲಯದ ಅಭಿವೃದ್ಧಿಗಾಗಿ ಈ ಶಾಂತಿಯನ್ನು ಮಾಡಬೇಕು.

5. **ಸರ್ವಾದ್ಭುತ ಶಾಂತಿ** - ಮನೆಯಲ್ಲಿ ಅಮಂಗಲವಾದ ಘಟನೆಗಳು ನಡೆದಾಗ ಉದಾಹರಣೆಗೆ ಮನೆಗೆ ಬೆಂಕಿ ತಗಲುವುದು, ಮನೆಗೆ ಕಾಗೆ ಪ್ರವೇಶಿಸುವುದು, ಮನೆಯಲ್ಲಿ ಜೇನುಗೂಡು ಕಟ್ಟುವುದು ಮನೆಯ ಒಂದು ಭಾಗ ಕುಸಿಯುವುದು ಇಂತಹ ಅನಿಷ್ಠಗಳಿದ್ದಲ್ಲಿ ಈ ಶಾಂತಿಯನ್ನು ಮಾಡಿಕೊಳ್ಳಬೇಕು.
6. **ಗ್ರಾಮೊತ್ಪಾತ ಶಾಂತಿ** - ಗ್ರಾಮದಲ್ಲಿ ಉತ್ಪನ್ನವಾಗಿರುವ ನಾನಾವಿಧ ಭಾದೆ ನಿವಾರಣೆಗೆ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
7. **ರಕ್ತ ವಲ್ಮೀಕ ಶಾಂತಿ** - ದೇವಾಲಯದಲ್ಲಿ, ಮನೆಯಲ್ಲಿ ಅಥವಾ ಸಭಾಸ್ಥಾನದಲ್ಲಿ ಉತ್ಪತ್ತಿಯಾಗಿರುವ ಹುತ್ತವು ಅಶುಭ ಸೂಚಕವಾಗಿರುವುದರಿಂದ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
8. **ವಾನರ ಪ್ರವೇಶ ಶಾಂತಿ** - ಮನೆಯೊಳಗೆ ವಾನರ ಪ್ರವೇಶವಾದಲ್ಲಿ ಬರುವ ಅಪಮೃತ್ಯು, ಮಹಾರೋಗಾದಿ ಸರ್ವ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಬೇಕು.
9. **ಮರ್ಕಟ ಪ್ರವೇಶ ಶಾಂತಿ** ಮನೆಯೊಳಗೆ ಕೃಷ್ಣಮುಖ ವಾನರ ಪ್ರವೇಶವಾದಲ್ಲಿ ಬರುವ ಅಪಮೃತ್ಯು, ಮಹಾರೋಗಾದಿ ಸರ್ವ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಬೇಕು.
10. **ಮಹಿಷಿ ಪ್ರವೇಶ ಶಾಂತಿ** ಮನೆಯೊಳಗೆ ಎಮ್ಮೆ ಅಥವಾ ಕೋಣ ಪ್ರವೇಶಿಸಿದರೆ ಸೂಚಿತ ಅಪಮೃತ್ಯು ಹಾಗೂ ಸರ್ವ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಬೇಕು.
11. **ದೀಪಪತನ ಶಾಂತಿ** ಮನೆಯಲ್ಲಿ ಪೂಜೆ ಮಾಡುತ್ತಿರುವಾಗ ಉರಿಯುತ್ತಿರುವ ದೀಪ ಆರಿಹೋದಲ್ಲಿ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಬೇಕು.
12. **ಭೀತಿಹರ ದಕ್ಷಾಕರ ದುರ್ಗಾ ಶಾಂತಿ** - ಗ್ರಹ ಪೀಡೆಗಳಿಂದ ಪುನಃ ಪುನಃ ಆಗುತ್ತಿರುವ ತೊಂದರೆಗಳ ನಿವಾರಣೆಗೆ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.
13. **ಅನಾವೃಷ್ಟ್ಯಾದಿ ಶಾಂತಿ** - ಇದನ್ನು ಸಾಮೂಹಿಕವಾಗಿ ಉತ್ಪತ್ತಿಯಾಗಿರುವ ಮಹಾಮಾರಿ, ಪಶುರೋಗಾದಿ ನಿವಾರಣೆಗೆ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

14. **ಕೃತ್ಯಾದ್ರೋಹ ಶಾಂತಿ** - ವಿರೋಧಿಗಳು ಯಾವುದೆ ಕುಟುಂಬ, ಉದ್ಯಮ, ಕೊಷ್ಟಗಳ ಮೇಲೆ ಮಾಡಿದ ಕೃತ್ರಿಮ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಬೇಕು.

15. **ದುಃಸ್ವಪ್ನ ಶಾಂತಿ** - ಕೆಲವೊಂದು ಸ್ವಪ್ನಗಳು ಅಮಂಗಲತೆಯ ಮುನ್ಸೂಚನೆ ಆಗಿರುವುದರಿಂದ ಈ ದೋಷ ನಿವಾರಣೆಗಾಗಿ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

16. **ಪರ್ಜನ್ಯ ಶಾಂತಿ** - ದೇಶದ ಅಥವಾ ಯಾವುದೇ ಪ್ರಾಂತದಲ್ಲಿ ಸಕಾಲದಲ್ಲಿ ಮಳೆ ಆಗದಿದ್ದಲ್ಲಿ ಜೀವಿಗಳಿಗೆ ಅತಿ ಆತಂಕವಾಗುವುದು. ಆ ಪರಿಸ್ಥಿತಿ ನಿವಾರಣೆಗೆ ಪ್ರಕೃತಿ ದೇವಿಯನ್ನು ಶಾಂತಿಗೊಳಿಸಿ ಮಳೆ ಪಡೆಯುವುದಕ್ಕೆ ಈ ಶಾಂತಿ ಹೆಸರಿದೆ.

17. **ವೃಷ್ಟಿ ವೈಕೃತ ವೃಕ್ಷೋತ್ಪಾತ ವನಸ್ಪತಿ ಶಾಂತಿ** - ಭೂಮಿಯ ಮೇಲೆ ಮಳೆ ಇಲ್ಲದಿದರೂ ಕಷ್ಟ, ಅತಿಯಾದರೂ ಕಷ್ಟ. ವಿಶೇಷವಾಗಿ ಈ ಶಾಂತಿಯನ್ನು ಮಳೆ, ಗಾಳಿ, ಸಿಡಿಲಿನಿಂದ ಅರಣ್ಯ ಮತ್ತು ಫಲಗಳು ನಾಶವಾಗುತ್ತಿದ್ದಲ್ಲಿ ಪ್ರಕೃತಿದೇವಿಯನ್ನು ಶಾಂತಗೊಳಿಸಲು ಈ ಶಾಂತಿಯನ್ನು ಮಾಡಬೇಕು.

18. **ಗ್ರಹಣ ಶಾಂತಿ** - ಒಂದು ವೇಳೆ ಸೂರ್ಯಾ ಅಥವಾ ಚಂದ್ರ ಗ್ರಹಣವು ನಮ್ಮ ಜನ್ಮ ರಾಶಿಯಿಂದ 4, 8, 12ನೇ ರಾಶಿಯಲ್ಲಿ ಸಂಭವಿಸುತ್ತಿದ್ದರೆ ಅದು ಅನಿಷ್ಟಕರವಾದ್ದರಿಂದ ಈ ಶಾಂತಿಯನ್ನು ಮಾಡುವುದು ಉತ್ತಮ.

19. **ಪ್ರಪೌತ್ರ ದರ್ಶನ ಶಾಂತಿ** ಒಂದು ವೇಳೆ ನಮ್ಮ ಮಗನಿಗೆ ಮಗನು ಜನಿಸಿ, ಅವನಿಗೆ ಮಗನು ಜನಿಸಿದಾಗ ನಾವು ಪ್ರಪೌತ್ರವನ್ನು ಪಡೆದಂತೆ.ಈ ಪ್ರಪೌತ್ರ ದರ್ಶನವು ಮುತ್ತಜ್ಜನಿಗೆ ಒಳ್ಳೆಯದಲ್ಲ. ಆದ್ದರಿಂದ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

20. **ಸರ್ವವ್ಯಾಧಿಹರ ನಾಮತ್ರಯೀ ಶಾಂತಿ** - ಜನ್ಮಾಂತರಗಳಿಂದ ಸಂಚಿತ ಪ್ರಾರಾಬ್ಧರೂಪ ಪಾಪ, ನಿವೃತ್ತಿ ಮತ್ತು ವ್ಯಾಧಿ ಬಾಧೆ ನಿವಾರಣೆಗಾಗಿ ಮತ್ತು ಆಯಸ್ಸು ಆರೋಗ್ಯ ಪ್ರಾಪ್ತಿಗಾಗಿ ಈ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

21. **ಕುಂಭ ವಿವಾಹ ಶಾಂತಿ** - ಒಂದು ವೇಳೆ ಯುವತಿಯ ಕುಂಡಲಿಯಲ್ಲಿ ವೈಧವ್ಯ ಯೋಗವಿದ್ದಾಗ ಅಥವಾ ಎರಡು ಇಲ್ಲವೇ ಮೂರು ವಿವಾಹ ಯೋಗವಿದ್ದಲ್ಲಿ ದೋಷ ನಿವಾರಣೆಗೆ ಈ ಶಾಂತಿಯನ್ನು ಮಾಡಿಸುವುದು ಉತ್ತಮ.
22. **ಕದಳಿ ವಿವಾಹ ಶಾಂತಿ** - ಈ ವಿಧಿಯನ್ನು ಸಹ ಮೇಲೆ ಕಾಣಿಸಿದ ದೋಷ ನಿವಾರಣೆಗೆ ಮಾಡಿಸಲಾಗುತ್ತದೆ.
23. **ಅರ್ಕ ವಿವಾಹ ಶಾಂತಿ** - ಒಂದು ವೇಳೆ ಯುವಕನ ಜಾತಕದಲ್ಲಿ ಮೊದಲನೇಯ ವಿವಾಹವಾಗಿ ಆತನ ಪತ್ನಿಯು ಪತಿಯನ್ನು ತ್ಯಜಿಸಿದಾಗ ಇಲ್ಲವೇ ಮರಣ ಹೊಂದಿದಾಗ ಅದೇ ರೀತಿ ಎರಡನೇಯ ವಿವಾಹವು ಇದೇ ರೀತಿಯಾದಲ್ಲಿ ಮೂರನೇಯ ವಿವಾಹವಾಗುವ ಮುನ್ನ ಈ ಶಾಂತಿಯನ್ನು ಮಾಡಿಸಿಕೊಂಡು ವಿವಾಹವಾಗಬೇಕು.

ಹೀಗೆ ಅನೇಕ ವಿಧವಾದ ಶಾಂತಿ, ಹೋಮ, ಯಜ್ಞಾದಿಗಳು ಇರುತ್ತಿದ್ದು ಅವುಗಳನ್ನು ಜ್ಯೋತಿಷ್ಯಿಗಳ ಅಥವಾ ಪುರೋಹಿತರ ಸಲಹೆಯಂತೆ ಅಗತ್ಯ ಇದ್ದಲ್ಲಿ ಮಾಡಿಸಿಕೊಳ್ಳಬೇಕು. ಯಾಕೆಂದರೆ ಒಂದೇ ಮನೋಕಾಮನೆಗಾಗಿ ಅನೇಕ ವಿಧಿಗಳು ಇರುತ್ತವೆ. ಸಮಸ್ಯೆಯನ್ನು ತಿಳಿದು ಬೇಕಾದುದನ್ನು ಮಾಡಿದರೆ ಪರಿಹಾರ ಖಚಿತ. ಸರಿಯಾದ ತಿಳುವಳಿಕೆ ಮತ್ತು ಧರ್ಮಸಂಪನ್ನರಾದ ವೈದಿಕರಿಂದ ಶಾಂತ್ಯಾದಿಗಳನ್ನು ಮಾಡಿಸಬೇಕು. ಫಲ ನಿಶ್ಚಿತವಾಗಿ ಸಿಗುತ್ತದೆ.

----- ****** ----

# 5 ಜಪ-ಮಂತ್ರ-ಅನುಷ್ಠಾನ, ಹೋಮಗಳು

## 5.1 ಜಪ-ಮಂತ್ರ-ಅನುಷ್ಠಾನ ವಿಭಾಗಃ

ಈ ಜಗತ್ತು ದೇವತೆಗಳ ಅಧೀನ. ದೇವತೆಗಳು ಮಂತ್ರದ ಅಧೀನ. ಆದ್ದರಿಂದ ನಾವು ಶ್ರದ್ಧಾ-ಭಕ್ತಿ ಮತ್ತು ಛಲದಿಂದ ಜಪ ಮತ್ತು ಮಂತ್ರಗಳ ಅನುಷ್ಠಾನ ಮಾಡಬೇಕು. ಜಪ ಹಾಗೂ ಮಂತ್ರಗಳನ್ನು ಗುರು ಮುಖದಿಂದ ಉಪದೇಶ ಪಡೆದು ಅನುಷ್ಠಾನ ಮಾಡಬೇಕು. ಜಪ-ತಂತ್ರ-ಮಂತ್ರಗಳನ್ನು ಒಳ್ಳೆಯ ಕಾರ್ಯಕ್ಕಾಗಿ ಮಾತ್ರ ಬಳಸಬೇಕು. ಬೇರೆಯವರಿಗೆ ಕೆಡುಕಾಗುವಂತೆ ಮಾಡಬಾರದು. ಇದು ಕೊನೆಯಲ್ಲಿ ನಮಗೇ ಮಾರಕವಾಗುತ್ತದೆ. ಭಗವತ್ ಶಕ್ತಿಯನ್ನು ಒಲಿಸಿಕೊಳ್ಳುವುದಕ್ಕಿಂತ ಅಸುರೀ ಶಕ್ತಿಯನ್ನು ಒಲಿಸಿಕೊಳ್ಳುವುದು ಅತಿ ಕಠಿಣ. ಆದರೆ ಕೆಲವರು ಅಸುರೀ ಶಕ್ತಿಯನ್ನೇ ಆರಾಧಿಸುತ್ತಾರೆ. ಇದು ಒಳ್ಳೆಯದಲ್ಲ.

**ಜಪಗಳು** - ಒಂದೊಂದು ಬೀಜಾಕ್ಷರಗಳಿಗೂ ಅತಿಯಾದ ಶಕ್ತಿಗಳಿರುತ್ತದೆ. ಋಷಿ-ಛಂದಸ್ಸು – ನ್ಯಾಸ - ಧ್ಯಾನ - ಮಂತ್ರ ಹೀಗೇ ಕ್ರಮವಾಗಿ ಎಲ್ಲವನ್ನೂ ಮಾಡಿ ನಂತರ ಜಪವನ್ನು ಮಾಡಬೇಕು. ನ್ಯಾಸದ ಮೂಲಕ ಮೊದಲು ನಮ್ಮಲ್ಲಿ ಜಪಿಸುವ ದೇವರನ್ನು ಸ್ಥಾಪಿಸಿಕೊಂಡು ನಂತರ ಜಪವನ್ನು ಮಾಡಬೇಕು. ಕೆಲವು ಜಪಗಳಲ್ಲಿ ಮಾರಣ – ಮೋಹನ – ಸ್ಥಂಬನ - ವಿಚ್ಛಾಟನಾದಿ ಶಕ್ತಿಗಳಿರುತ್ತದೆ. ಆದ್ದರಿಂದ ಯಾವುದೇ ಜಪವನ್ನು ಗುರುಮುಖದಿಂದ ಉಪದೇಶ ಪಡೆದು ಒಳ್ಳೆಯದಕ್ಕಾಗಿ ಉಪಯೋಗಿಸಬೇಕು. ಆಗ ಒಳ್ಳೆಯದಾಗುತ್ತದೆ. ಓದಲು ಬರುತ್ತದೆ ಎಂದು ಪುಸ್ತಕವನ್ನೋ ಅಥವಾ ಇನ್ನಾವುದನ್ನೋ ನೋಡಿ ಜಪಾದಿಗಳನ್ನು ಮಾಡಬೇಡಿರಿ. ಇದಕ್ಕೆ ಫಲ ಸಿಗಲಾರದು. ಜಪ ಅನುಷ್ಠಾನಗಳಲ್ಲಿ ದೇಶ-ಕಾಲ ಅನುಸಾರದಂತೆ ತುಂಬಾ ವಿಧಗಳಿವೆ. ಆದರೆ ನಾವಿಲ್ಲಿ ಕೆಲವನ್ನು ಮಾತ್ರ ತಿಳಿಸಿರುತ್ತೇವೆ. ಅವಶ್ಯಕತೆ ಇದ್ದಲ್ಲಿ ಮಂತ್ರಮಹಾರ್ಣವ, ಮಂತ್ರಮಹೋದಧಿ, ಪ್ರಪಂಚ ಸಾರ, ಶಾರದ ತಿಲಕ ಮುಂತಾದ ಗ್ರಂಥಗಳಿಂದ ತಿಳಿಯಬೇಕಾಗುತ್ತದೆ. ಎಲ್ಲರಿಗೂ ಒಳ್ಳೆಯದಾಗಬೇಕು. ಕಷ್ಟ ನಿವಾರಣೆ ಆಗಬೇಕು ಎಂಬ ಉದ್ದೇಶದಿಂದ ಸೂಚಿಸಿದ ಕ್ರಮದಂತೆ ಅನುಷ್ಠಾನ ಮಾಡಿರಿ, ಒಳ್ಳೆಯದಾಗುವುದು.

1. **ಬಾಲ ಗಣಪತಿ ಮಂತ್ರಃ** - ಓಂ ಶಕ್ತಿ ಋಷಿಃ । ಗಾಯತ್ರಿ ಛಂದಃ । ಬಾಲಗಣಪತಿರ್ದೇವತಾ । ಓಂ ಗರ್ಗರ್ಲ ಹ್ರಾಂ ಹೃದಯಾಯ ನಮಃ । ಓಂ ಗರ್ಗರ್ಲ ಹ್ರೀಂ ಶಿರಸೆ ಸ್ವಾಹಾ । ಓಂ ಗರ್ಗರ್ಲ ಹ್ರುಂ ಶಿಖಾಯೈ ವಷಟ್ । ಓಂ ಗರ್ಗರ್ಲ ಹ್ರೈಂ ಕವಚಾಯ ಹುಂ । ಓಂ ಗರ್ಗರ್ಲ ಹ್ರೋಂ ನೇತ್ರತ್ರಯಾಯ ವೌಷಟ್ । ಓಂ ಗರ್ಗರ್ಲ ಹ್ರಃ ಅಸ್ತ್ರಾಯ ಫಟ್ । ಓಂ ಭೂರ್ಭುವಃ ಸ್ಸುವರೋಂ ಇತಿ ದಿಗ್ಬಂಧಃ ॥ ಧ್ಯಾನಂ ॥ ಬಾಲಪ್ರಸೂತ ಮಾತ್ರೋಯಂ ಅಂಬಿಕಾಮ್ಬೆ ನಿವೇಶಿತಃ ಅತಿರಕ್ತೋ ಗಜಮುಖಃ ದ್ವಿರದೋ ರಕ್ತ ಭೂಷಣಃ । ಚಶಂಕ ಪುಷ್ಕರೇ ಬಿಭ್ರುತ್ ಸ್ತಣೀ ಪಾಶೌ ಕರದ್ವಯೇ ದ್ವಾಭ್ಯಂ ಕಲ್ಪಲತಾಂ ದೋರ್ಭ್ಯಾ ಗೊಮಯನ್ ರತ್ನ ದರ್ಶಿಣೀಂ ॥ ಮಂತ್ರ ॥ ಓಂ ಐಂ ಹ್ರೀಂ ಗರ್ಗರ್ಲ ರೀಂ ಹ್ರೀಂ ಸೌಂ ಸ್ವಾಹಾ ॥ (ಹರಿದ್ರಾ ಚೂರ್ಣ ನಾಳಿಕೇರ ಕದಳೀ ಫಲ ಶರ್ಕರ ಮಧು ಮಿಶ್ರೈಃ ಪೂರ್ವಾಜ್ಯ ಅಪರಾಜ್ಯ ಸಹಿತೈಃ ಅಷ್ಟೋತ್ತರ ಸಹಸ್ರಂ ಜೂಹೂಯಾತ್ ॥

2. **ಮಹಾಗಣಪತಿ ಮಂತ್ರಃ** - ಅಸ್ಯ ಶ್ರೀ ವಲ್ಲಭಾಮಹಾಗಣಪತಿಮಹಾಮಂತ್ರಸ್ಯ । ಗಣಕ ಋಷಿಃ । ನಿಚೃದ್ಗಾಯತ್ರೀ ಛಂದಃ । ಶ್ರೀ ವಲ್ಲಭಾಮಹಾಗಣಪತಿರ್ದೇವತಾ । ಗಾಂ ಬೀಜಂ । ಗೀಂ ಶಕ್ತಿಃ । ಗೂಂ ಕೀಲಕಂ । ಶ್ರೀ ವಲ್ಲಭಮಹಾಗಣಪತಿ ಜಪೇ ವಿನಿಯೋಗಃ ॥ ಓಂ ಗಾಂ- ಅಂಗುಷ್ಟ - ಹೃದಯ - ಓಂ ಗೀಂ- ತರ್ಜನೀ - ಶಿರಸೇ - ಓಂ ಗೂಂ- ಮಧ್ಯಮ - ಶಿಖಾಯೈ - ಓಂ ಗೈಂ- ಅನಾಮಿಕ - ಕವಚ - ಓಂ ಗೌಂ - ಕನಿಷ್ಠಿಕ - ನೇತ್ರತ್ರಯಾಯ - ಓಂ ಗಃ - ಕರತಲಕರ - ಅಸ್ತ್ರಾಯ - (ಏವಂ ಅಂಗನ್ಯಾಸಂ ಹೃದಯಾದಿ ನ್ಯಾಸಂ ಕುರ್ಯಾತ್) ॥ ಧ್ಯಾನಂ ॥ ಬೀಜಾಪೂರ ಗದೇಕ್ಷು ಕಾರ್ಮುಕಜೌ ಚಕ್ರಾಬ್ಜ ಪಾಶೋತ್ಪಲ ವ್ರೀಹ್ಯಹ್ರಸ್ವ ವಿಷಾಣರತ್ನ ಕಲಶ ಪ್ರೋದ್ಯುಕ್ತ ರಾಂಭೋರುಹೈಃ । ಧ್ಯೇಯೋ ವಲ್ಲಭ ಯಾಚ ಪದ್ಮಕರಯಾ ಶ್ಲಿಷ್ಟೋಜ್ವಲದ್ಭೂಷಯಾ ವಿಶ್ವೋತ್ಪತ್ತಿ ವಿನಾಶ ಸಂಸ್ಥಿತ ಕರೋ ವಿಘ್ನೋ ವಿಶಿಷ್ಟಾರ್ಥದಃ ॥ ('ಲಂ' ಇತ್ಯಾದಿ ಪಂಚೋಪಚಾರಪೂಜಾಂ ಕುರ್ಯಾತ್) ಮಂತ್ರ ॥ ಓಂ ಶ್ರೀಂ ಹ್ರೀಂ

ಕ್ಲೀಂ ಗ್ಲೌಂ ಗಂ ಗಣಪತಯೇ ವರವರದ ಸರ್ವಜನಂ ಮೇ ವಶಮಾನಯ ಸ್ವಾಹಾ ॥

3. **ನವಗ್ರಹ ಬೀಜ ಮಂತ್ರಗಳು - ಸೂರ್ಯ** - ಓಂ ಹ್ರಾಂ ಹ್ರೀಂ ಹ್ರೌಂ ಸಃ ಸೂರ್ಯಾಯ ನಮಃ, ಓಂ ಘೃಣಿಃ ಸೂರ್ಯಾಯ ನಮಃ. **ಚಂದ್ರ** - ಓಂ ಶ್ರಾಂ ಶ್ರೀಂ ಶ್ರೌಂ ಸಃ ಸೋಮಾಯನಮಃ, ಓಂ ಸೋಂ ಸೋಮಾಯನಮಃ. **ಮಂಗಲ** - ಓಂ ಕ್ರಾಂ ಕ್ರೀಂ ಕ್ರೌಂ ಸಃ ಭೌಮಾಯ ನಮಃ, ಓಂ ಅಂ ಅಂಗಾರಕಾಯ ನಮಃ. **ಬುಧ** - ಓಂ ಬ್ರಾಂ ಬ್ರೀಂ ಬ್ರೌಂ ಸಃ ಬುಧಾಯ ನಮಃ, ಓಂ ಬುಂ ಬುಧಾಯ ನಮಃ, **ಗುರು** - ಓಂ ಗ್ರಾಂ ಗ್ರಿಂ ಗ್ರೌಂ ಸಃ ಬೃಹಸ್ಪತಯೇ ನಮಃ, ಓಂ ಬೃಂ ಬೃಹಸ್ಪತಯೇ ನಮಃ. **ಶುಕ್ರ** - ಓಂ ದ್ರಾಂ ದ್ರೀಂ ದ್ರೌಂ ಸಃ ಶುಕ್ರಾಯ ನಮಃ, ಓಂ ಶುಂ ಶುಕ್ರಾಯ ನಮಃ. **ಶನಿಶ್ಚರ** - ಓಂ ಪ್ರಾಂ ಪ್ರೀಂ ಪ್ರೌಂ ಸಃ ಶನೈಶ್ಚರಾಯ ನಮಃ, ಓಂ ಶಂ ಶನೈಶ್ಚರಾಯ ನಮಃ. **ರಾಹು** ಓಂ ಭ್ರಾಂ ಭ್ರೀಂ ಭ್ರೌಂ ಸಃ ರಾಹವೇ ನಮಃ, ಓಂ ರಾಂ ರಾಹವೇ ನಮಃ. **ಕೇತು** ಓಂ ಸ್ರಾಮ ಸ್ರೀಂ ಸ್ರೌಂ ಸಃ ಕೇತವೇ ನಮಃ, ಓಂ ಕೇಂ ಕೇತವೇ ನಮಃ.

ಮೇಲಿನವು ಕೇವಲ ಉದಾಹರಣೆಗೆ ತಿಳಿಸಿದೆ. ಗಾಯತ್ರಿಮಂತ್ರ, ಅಷ್ಟಾಕ್ಷರೀ, ಪಂಚಾಕ್ಷರೀ, ಮಹಾಮೃತ್ಯುಂಜಯ ಮಂತ್ರ, ಸುದರ್ಶನ ಮಂತ್ರ ಹೀಗೆ ಹಲವಾರು ಮಂತ್ರಗಳಿದ್ದು ತಿಳಿದವರನ್ನು ಕೇಳಿ ಉಪದೇಶ ಪಡೆದು ಜಪತಪ ಅನುಷ್ಠಾನಗಳನ್ನು ಕೈಗೊಳ್ಳಿ.

## 5.2 ಹೋಮ-ಹವನ ವಿಭಾಗ

1. **ಗಣಹೋಮ** - ಎಲ್ಲಾ ಕಷ್ಟಗಳನ್ನು ಮತ್ತು ಕಾರ್ಯದಲ್ಲಿ ಬರುತ್ತಿರುವ ವಿಘ್ನಗಳನ್ನು ನಿವಾರಣೆಗೊಳಿಸಲು.
2. **ವಲ್ಲಭ ಗಣಪತಿ ಹೋಮ** - ಗಣಪತಿ ಅನುಗ್ರಹ ಪ್ರಾಪ್ತಿಗಾಗಿ.
3. **ಶ್ರೀ ಶಕ್ತಿ ಗಣಪತಿ ಹೋಮ** - ಗಣಪತಿ ಅನುಗ್ರಹ ಪ್ರಾಪ್ತಿಗಾಗಿ.

4. ಶೀಘ್ರ ವಿವಾಹ ಪ್ರಾಪ್ತಿಗಾಗಿ ಹರಿದ್ರಾ ಗಣಪತಿ ಹೋಮ, ಬಾಲ ಗಣಪತಿ ಹೋಮ, ತ್ರೈಲೋಕ್ಯ ಮೋಹನ ಗಣಪತಿ ಹೋಮ, ಜಾತಕದಲ್ಲಿ ಸೂಚಿಸಿದಂತೆ, ವಿವಾಹವಾಗುವಲ್ಲಿ ಬರುವ ವಿಘ್ನನಿವಾರಣೆಗೆ ಆಚರಿಸಬೇಕು.
5. **ಲಕ್ಷ್ಮೀಗಣಪತಿ ಹೋಮ** - ಲಕ್ಷ್ಮಿ ಪ್ರಾಪ್ತಿಗಾಗಿ ಆಚರಿಸಬೇಕು.
6. **ಚಿಂತಾಮಣಿ ಗಣಪತಿ ಹೋಮ** ಮನಸ್ಸಿನ ಎಲ್ಲಾ ಕಾಮನೆಗಳನ್ನು ಪಡೆಯಲು ಈ ಹೋಮ ಮಾಡಬೇಕು.
7. ವಿದ್ಯಾ ಪ್ರಾಪ್ತಿಗಾಗಿ ಮೇಧಾ ಗಣಪತಿ ಹೋಮ, ಬುದ್ಧಿ ಗಣಪತಿ ಹೋಮ, ಸಿದ್ಧಿ ಗಣಪತಿ ಹೋಮ, ಅಷ್ಟ ದ್ರವ್ಯ ಗಣಹೋಮ, ಜಾತಕದ ಸೂಚನೆಯಂತೆ ಆಚರಿಸಬೇಕು.
8. ಸಾಲದ ಬಾಧೆ ನಿವಾರಣೆಗೆ ಋಣ ಹರಣ ಗಣಪತಿ ಹೋಮ ಕ್ಷಿಪ್ರ ಗಣಪತಿ ಹೋಮ, ಸ್ವರ್ಣ ಗಣಪತಿ ಹೋಮ, ಸಂಕಟಹರ ಗಣಪತಿ ಹೋಮ, ಗುರುಗಳ ಆದೇಶದಂತೆ ಆಚರಿಸಬೇಕು.
9. **ವಿನಾಯಕ ಶಾಂತಿ** ಮಾಡುತ್ತಿರುವ ಕಾರ್ಯದಲ್ಲಿ ವಿಘ್ನ ಬರದಿರಲೆಂದು ಈ ಹೋಮವನ್ನು ಆಚರಿಸಬೇಕು.
10. ವಿದ್ಯಾ ಪ್ರಾಪ್ತಿಯಲ್ಲಿ ಬರುತ್ತಿರುವ ದೋಷ ನಿವಾರಣೆಗಾಗಿ ವಾಕ್ ಸರಸ್ವತಿ ಹೋಮ, ನೀಲಾ ಸರಸ್ವತಿ ಹೋಮ, ದಕ್ಷಿಣಾ ಮೂರ್ತಿ ಹೋಮ, ಗುರುಗಳ ಅನುಮತಿಯಂತೆ ಆಚರಿಸಬೇಕು.
11. ಗ್ರಹ ಬಾಧೆಯಿಂದ ಜೀವನದಲ್ಲಿ ಬರುವ ರೋಗ ಪೀಡಾ ಪರಿಹಾರಕ್ಕಾಗಿ ಮತ್ತು ಅಕಾಲ ಮೃತ್ಯು ನಿವಾರಣೆಗಾಗಿ ಮಾಡಬೇಕಾದ ಹೋಮಗಳು ಮಹಾ ಮೃತ್ಯುಂಜಯ ಹೋಮ, ಅಮೃತ ಮೃತ್ಯುಂಜಯ ಹೋಮ, ಅಭಯಾಯುಷ್ಯ ಹೋಮ, ಉಗ್ರ ನರಸಿಂಹ ಹೋಮ, ದೂರ್ವಾ ಮೃತ್ಯುಂಜಯ ಹೋಮ, ಆಯುಷ್ಯ(ಚರು)ಹೋಮ
12. ವಿರೋಧಿಗಳು ಮಾಡುವ ಮಾಟ, ಮಂತ್ರ, ತಂತ್ರ, ಯಂತ್ರಾದಿ ದುಷ್ಕರ್ಮ ಉಚ್ಚಾಟನೆಗಾಗಿ, ರಕ್ಷೆಗಾಗಿ ಮಹಾ ಸುದರ್ಶನ ಹೋಮ, ಅಘೋರಾಸ್ತ್ರ ಹೋಮ, ಪ್ರತ್ಯಂಗಿರಾ ಹೋಮ, ಬಗಲಾಮುಖಿ ಹೋಮ, ಶರಭೇಶ್ವರ ಹೋಮ, ಶೂಲಿನಿ

ದುರ್ಗಾ ಹೋಮ, ದತ್ತಾತ್ರೇಯ ಮಾಲಾಮಂತ್ರ ಹೋಮ, ಆಂಜನೇಯ ಮಂತ್ರ ಹೋಮ

13. ಮಹಾಲಕ್ಷ್ಮಿ ಅನುಗ್ರಹ ಪ್ರಾಪ್ತಿ ಮತ್ತು ಉದ್ಯೋಗ, ವ್ಯವಹಾರ ಜಯ ಪ್ರಾಪ್ತಿಗಾಗಿ, ಶ್ರೀಸೂಕ್ತ ಹೋಮ, ಲಕ್ಷ್ಮೀ ಹೋಮ (ಕಮಲದ ಹೂವಿನಿಂದ), ಲಕ್ಷ್ಮಿ ನೃಸಿಂಹ ಹೋಮ, ಲಕ್ಷ್ಮಿ ನಾರಾಯಣ ಹೃದಯ ಹೋಮ, ಕುಬೇರ ಲಕ್ಷ್ಮೀ ಹೋಮ, ಚಂಡಿಕಾ ಹೋಮ (ನವ, ಶತ, ಸಹಸ್ರ)
14. ರೋಗ ನಿವೃತ್ತಿಗಾಗಿ ಮಾಡಬೇಕಾದ ಹೋಮಗಳು ಧನ್ವಂತರಿ ಹೋಮ, ಅಪಸ್ಮಾರ ದಕ್ಷಿಣಾಮೂರ್ತಿ ಹೋಮ, ನವಗ್ರಹ ಹೋಮ (ಪ್ರತ್ಯೇಕ ಗ್ರಹಶಾಂತಿ), ಸುಬ್ರಹ್ಮಣ್ಯ ಹೋಮ, ಜಾತಕದಲ್ಲಿ ಸೂಚಿಸಿದಂತೆ ರೋಗಕ್ಕೆ ಅನುಸಾರವಾಗಿ ಮಾಡಬೇಕು.
15. ಸ್ತ್ರೀ ಮತ್ತು ಪುರುಷರ ವಿವಾಹಕ್ಕೆ ಬರುತ್ತಿರುವ ಅಡ್ಡಿ, ಆತಂಕಗಳ ನಿವಾರಣೆಯಾಗಿ ಶೀಘ್ರ ವಿವಾಹ ಪ್ರಾಪ್ತಿಯಾಗಲು ಮಾಡಬೇಕಾದ ಹೋಮ ಉಗ್ರ ನೃಸಿಂಹ ಹೋಮ(28 ಸಾವಿರ ಜಪ ಮಾಡಬೇಕು), ಸ್ವಯಂವರ ಪಾರ್ವತಿ ಹೋಮ(10 ಸಾವಿರ ಜಪ ಮಾಡಬೇಕು), ಬಾಣೇಶಿ ಹೋಮ(10 ಸಾವಿರ ಜಪ ಮಾಡಬೇಕು), ಅಶ್ವಾರೂಢ ಪಾರ್ವತಿ ಹೋಮ(10 ಸಾವಿರ ಜಪ ಮತ್ತು ಹೋಮ ಮಾಡಬೇಕು),
16. ಜನ್ಮಾಂತರದಲ್ಲಿ ಮಾಡಿದ ಪಾಪಕರ್ಮದ ಫಲವಾಗಿ ಮಕ್ಕಳು ಆಗದೆ ಇದ್ದಾಗ ಮಾಡಬೇಕಾದ ಹೋಮಗಳು ಸಂತಾನ ಗೋಪಾಲಕೃಷ್ಣ ಹೋಮ, ನಾಗರಾಜ ಮಂತ್ರ ಹೋಮ, ಪುರುಷ ಸೂಕ್ತ ಹೋಮ, ಶ್ರೀ ವಿದ್ಯಾ ಹೋಮ, ಶ್ರೀ ರುದ್ರ ಹೋಮ (ಲಘು ರುದ್ರ, ಶತ ರುದ್ರ, ಮಹಾ ರುದ್ರ, ಅತಿ ರುದ್ರ) ಜಾತಕವನ್ನು ಪರಿಶೀಲಿಸಿ ಯೋಗ್ಯ ಸಲಹೆ ಪಡೆದು ಆಚರಿಸಬೇಕು.
17. ಕಳೆದು ಹೋದ ವಸ್ತು ಪ್ರಾಪ್ತಿಗಾಗಿ ಈ ಹೋಮವನ್ನು ಮಾಡಬೇಕು. ಕಾರ್ತವೀರ್ಯಾರ್ಜುನ ಜಪ ಹೋಮ
18. ನಮ್ಮ ಕ್ಷೇತ್ರಗಳನ್ನು, ಬೆಳೆಗಳನ್ನು ರಕ್ಷಿಸಲು, ದುಷ್ಟ ಪ್ರಾಣಿಗಳು ಮತ್ತು ದುರ್ಜನರಿಂದ ರಕ್ಷಣೆ ಪಡೆಯಲು ಮಾಡಬೇಕಾದ ಹೋಮಗಳು. ವನ ದುರ್ಗಾ

ಹೋಮ, ಭೂ ವರಾಹ ಹೋಮ, ರಾಮತಾರಕ ಹೋಮ, ಹನೂಮಾನ್ ಮಂತ್ರ ಹೋಮ.

----- ****** -----

# 6 ವ್ರತಾದಿಗಳು

ಈ ಜಗತ್ತಿನಲ್ಲಿ ಭಗವತ್ ಶಕ್ತಿಯನ್ನು ಒಲಿಸಿಕೊಳ್ಳಲು ನಾನಾ ವಿಧವಾದ ಮಾರ್ಗಗಳಿವೆ. ಅವುಗಳಲ್ಲಿ ವ್ರತವೂ ಒಂದು ಮಾರ್ಗವಾಗಿದೆ. ಇದನ್ನು ಭಕ್ತಿ ಶ್ರದ್ಧೆಯಿಂದ, ಶಾಸ್ತ್ರೋಕ್ತವಾಗಿ ಮಾಡಿದಲ್ಲಿ ಮನೋಕಾಮನೆಯನ್ನು ಖಂಡಿತವಾಗಿಯೂ ಪಡೆಯಬಹುದು.

## 6.1 ವ್ರತಗಳ ವಿಧಗಳು

### 1. ಸಕಾಮ (ಕಾಮ್ಯ) ವ್ರತಗಳು

ಯಾವುದಾದರೊಂದು ವಿಶಿಷ್ಟ ಇಷ್ಟಾರ್ಥ ಪೂರ್ತಿಗಾಗಿ ಮಾಡಿದ ವ್ರತವನ್ನು 'ಸಕಾಮ ವ್ರತ' ಎನ್ನುತ್ತಾರೆ. ಪುರಾಣದಲ್ಲಿ ಮತ್ತು ತಂತ್ರಗ್ರಂಥಗಳಲ್ಲಿ ಯಾವ ಇಷ್ಟಾರ್ಥಕ್ಕಾಗಿ ಯಾವ ಉಪಾಸನೆಯನ್ನು ಮಾಡಬೇಕೆನ್ನುವುದನ್ನು ಕೊಡಲಾಗಿದೆ. ಸಕಾಮ ಉಪಾಸನೆಯು ನೈಮಿತ್ತಿಕ ಉಪಾಸನೆಯಾಗಿದೆ. ಸಕಾಮ ಉಪಾಸನೆಯನ್ನು ಮುಹೂರ್ತ ಮತ್ತು ದಿನಶುದ್ಧಿಯನ್ನು ನೋಡಿ ನಿರ್ದಿಷ್ಟ ತಿಥಿಯಂದೇ ಮಾಡುತ್ತಾರೆ. ಸತ್ಯನಾರಾಯಣ ಮತ್ತು ಸತ್ಯದತ್ತ ವ್ರತಗಳು ಇಷ್ಟಾರ್ಥವನ್ನು ಬೇಗ ಪೂರೈಸುತ್ತವೆ ಎನ್ನುವ ನಂಬಿಕೆಯಿಂದಾಗಿ ಇವುಗಳನ್ನು ಬಹಳಷ್ಟು ಜನರು ಮಾಡುತ್ತಾರೆ. ವ್ರತದಿಂದ ಆಯಾ ವ್ರತದ ಅಧಿಷ್ಠಾನ ದೇವತೆಯು ಪ್ರಸನ್ನಳಾಗುತ್ತಾಳೆ ಮತ್ತು ಅವಳ ಕೃಪೆಯಿಂದ ವ್ರತಕ್ಕೆ ಫಲವು ಲಭಿಸುತ್ತದೆ. ಸಕಾಮ ವ್ರತದ ವಿಧಗಳು ಮುಂದಿನಂತಿವೆ.

1.1. ಧರ್ಮ ಸಾಧನೆಗೆ : ರಾಮನಾಮವೃತ, ಭಾಗವತ ಸಪ್ತಾಹ ಇತ್ಯಾದಿ ನೈಮಿತ್ತಿಕ ವೃತಗಳು.

1.2. ಅರ್ಥ (ಧನಾರ್ಜನೆಗೆ) : ಅನಂತ, ಕೋಜಾಗರಿ.

1.3. ಕಾಮ (ಇಚ್ಛಾಪೂರ್ತಿ): ಶನಿಪ್ರದೋಷ, ಶ್ರೀ ಗುರುಚರಿತ್ರ ಪಾರಾಯಣ, ಹರಿವಂಶ ಶ್ರವಣ, ಹದಿನಾರು ಸೋಮವಾರಗಳು (ಪುತ್ರಪ್ರಾಪ್ತಿಗಾಗಿ).

1.4. ಮೋಕ್ಷ: ಹದಿನಾರು ಸೋಮವಾರ

## 2. ನಿಷ್ಕಾಮ ವೃತಗಳು

ನಿಷ್ಕಾಮ ಎನ್ನುವ ಶಬ್ದವು, 'ವ್ಯಾವಹಾರಿಕ ವಿಷಯಗಳ ಬಗ್ಗೆ ಕಾಮನೆ ಇಲ್ಲದಿರುವುದು' ಎನ್ನುವ ಅರ್ಥದಲ್ಲಿದೆ. ನಿಷ್ಕಾಮ ಉಪಾಸನೆಯಲ್ಲಿಯೂ ಈಶ್ವರಪ್ರಾಪ್ತಿಯ ಅಥವಾ ಮೋಕ್ಷದ ಇಚ್ಛೆ ಇರುತ್ತದೆ.

2.1. ನಿತ್ಯ ಮತ್ತು ನೈಮಿತ್ತಿಕ

2.1.1. ನಿತ್ಯ ವೃತಗಳು: ವರ್ಣಾಶ್ರಮಕ್ಕನುಸಾರ ಮಾಡಬೇಕಾದ ಕರ್ತವ್ಯಗಳು, ಉದಾ. ಬ್ರಹ್ಮಚರ್ಯ, ಪೂಜೆ, ಸಂಧ್ಯಾವಂದನೆ ಇತ್ಯಾದಿ. ಇವುಗಳನ್ನು ದಿನನಿತ್ಯ ಮಾಡಬೇಕು.

2.1.2. ನೈಮಿತ್ತಿಕ ವೃತಗಳು: ಈ ವೃತಗಳನ್ನು ನಿರ್ದಿಷ್ಟ ತಿಥಿಗಳಂದು ಮಾಡುತ್ತಾರೆ, ಉದಾ. ವಟಪೂರ್ಣಿಮೆ, ಮಂಗಳಗೌರಿ, ಸ್ವರ್ಣಗೌರಿ ಹಬ್ಬ, ಗಣೇಶಚತುರ್ಥಿ, ಋಷಿಪಂಚಮಿ, ಕೋಜಾಗರಿ ಇತ್ಯಾದಿ.

## 3. ಆವಶ್ಯಕತೆಗನುಸಾರ

3.1. ಅತ್ಯಾವಶ್ಯಕ (ಪ್ರಾಯಶ್ಚಿತ್ತ): ಪ್ರಾಯಶ್ಚಿತ್ತವೆಂದು ಮಾಡಬೇಕಾದ ವೃತಗಳು, ಉದಾ. ಕೃಚ್ಛ್ರ, ಅರ್ಧಕೃಚ್ಛ್ರ, ಚಾಂದ್ರಾಯಣ ಇತ್ಯಾದಿ.

3.2. ಆವಶ್ಯಕ (ಕರ್ತವ್ಯ): ವರ್ಣಾಶ್ರಮಕ್ಕನುಸಾರ ಮಾಡಬೇಕಾದ ಕಾರ್ಯಗಳು ಮತ್ತು ಆಚರಣೆಗಳು, ಉದಾ. ಬ್ರಹ್ಮಚರ್ಯ, ಸಂಧ್ಯಾವಂದನೆ, ಅತಿಥಿಸತ್ಕಾರ ಇತ್ಯಾದಿ.

3.3.ಐಚ್ಛಿಕ: ವಿಶಿಷ್ಟ ಉದ್ದೇಶಕ್ಕಾಗಿ ಮಾಡಿದ ವ್ರತಗಳು, ಉದಾ.ಸಕಾಮ ವ್ರತಗಳು.

## 4. ಇಂದ್ರಿಯಕ್ಕನುಸಾರ

4.1. ಕಾಯಿಕ (ಶಾರೀರಿಕ) ವ್ರತಗಳು: ಉಪವಾಸ ಮಾಡುವುದು, ಒಪ್ಪೊತ್ತು ಊಟ ಮಾಡುವುದು, ಹಿಂಸೆಯನ್ನು ಮಾಡದಿರುವುದು ಇತ್ಯಾದಿ.

4.2. ವಾಚಿಕ ವ್ರತಗಳು: ನಾಮಜಪ ಮಾಡುವುದು, ಸತ್ಯ ನುಡಿಯುವುದು, ಮೃದುವಾಗಿ ಮಾತನಾಡುವುದು ಇತ್ಯಾದಿ.

4.3. ಮಾನಸಿಕ ವ್ರತಗಳು: ಬ್ರಹ್ಮಚರ್ಯಪಾಲನೆ, ಮನಸ್ಸಿನಿಂದಲೂ ಹಿಂಸೆಯನ್ನು ಮಾಡದಿರುವುದು, ಕೋಪಗೊಳ್ಳದಿರುವುದು ಇತ್ಯಾದಿ.

## 5. ಕಾಲಾನುಸಾರ

5.1. ವ್ರತವನ್ನು ಮಾಡುವ ಕಾಲಕ್ಕನುಸಾರ ಅಯನ, ಸಂವತ್ಸರ, ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರ, ಯೋಗ, ಕರಣ ಇತ್ಯಾದಿ ವರ್ಗಗಳಾಗುತ್ತವೆ.

5.1.1. ಮಾಸವ್ರತಗಳು: ವೈಶಾಖ, ಭಾದ್ರಪದ, ಕಾರ್ತಿಕ ಮತ್ತು ಮಾಘ ತಿಂಗಳುಗಳಲ್ಲಿನ ವ್ರತಗಳಿಗೆ ‘ಮಾಸವ್ರತಗಳು’ ಎನ್ನುತ್ತಾರೆ.

5.1.2. ಪಕ್ಷವ್ರತಗಳು: ಶುಕ್ಲ ಮತ್ತು ಕೃಷ್ಣ ಪಕ್ಷದಲ್ಲಿನ ವ್ರತಗಳಿಗೆ ‘ಪಕ್ಷವ್ರತಗಳು’ ಎನ್ನುತ್ತಾರೆ.

5.1.3. ತಿಥಿವ್ರತಗಳು: ಚತುರ್ಥಿ, ಏಕಾದಶಿ, ಭಾನುಸಪ್ತಮಿ, ತ್ರಯೋದಶಿ ಮತ್ತು ಅಮಾವಾಸ್ಯೆ ಇವುಗಳನ್ನು ತಿಥಿವ್ರತಗಳೆಂದು ಪರಿಗಣಿಸುತ್ತಾರೆ.

5.1.4. ವಾರವ್ರತಗಳು: ಸೋಮ, ಮಂಗಳ, ಶುಕ್ರ ಮತ್ತು ಶನಿ ಈ ದಿನಗಳ ವ್ರತಗಳು ವಾರವ್ರತಗಳಾಗಿವೆ.

5.1.5. ನಕ್ಷತ್ರವ್ರತಗಳು : ಶ್ರವಣ, ಅನುರಾಧಾ ಮತ್ತು ರೋಹಿಣಿ ನಕ್ಷತ್ರಗಳಲ್ಲಿನ ವ್ರತಗಳಿಗೆ ನಕ್ಷತ್ರವ್ರತಗಳು ಎನ್ನುತ್ತಾರೆ.

5.1.6. ಇತರ ವ್ರತಗಳು: ವ್ಯತಿಪಾತದಂತಹ ಯೋಗವ್ರತ, ಭದ್ರಾದಂತಹ ಕರಣವ್ರತ ಇಂತಹ ವ್ರತಗಳೂ ಇರುತ್ತವೆ.

5.2. ಬಹುತೇಕ ವ್ರತಗಳು ಶುಕ್ಲ ಪ್ರತಿಪದೆಯಿಂದ ಸಪ್ತಮಿ ಅಥವಾ ಅಷ್ಟಮಿಯ ವರೆಗೆ ಇರುತ್ತವೆ; ಏಕೆಂದರೆ ಆಗ ವೃದ್ಧಿಸುತ್ತಿರುವ ಚಂದ್ರನು ಕಾಣಿಸುತ್ತಾನೆ ಹಾಗೂ ವ್ರತದ ಉದ್ದೇಶವು ಸಫಲವಾಗುವ ಅವಕಾಶವೂ ಹೆಚ್ಚಾಗುತ್ತಾ ಹೋಗುತ್ತದೆ.

6. **ದೇವತೆಗಳಿಗನುಸಾರ:** ಉಪಾಸ್ಯದೇವತೆಗನುಸಾರ ಗಣೇಶವ್ರತ, ಸೂರ್ಯವ್ರತ, ಶಿವವ್ರತ, ವಿಷ್ಣುವ್ರತ, ದೇವೀವ್ರತ ಎಂಬ ವ್ರತಗಳಿರುತ್ತವೆ.
7. **ವೈಯಕ್ತಿಕ ಮತ್ತು ಸಾಮೂಹಿಕ** - ಬಹುತೇಕ ಎಲ್ಲ ವ್ರತಗಳು ವೈಯುಕ್ತಿಕವಾಗಿರುತ್ತವೆ. ಚೈತ್ರದಲ್ಲಿನ ಶ್ರೀರಾಮನವಮಿ, ಶ್ರಾವಣದಲ್ಲಿನ ಶ್ರೀಕೃಷ್ಣಾಷ್ಟಮಿ, ಭಾದ್ರಪದದಲ್ಲಿನ ಶ್ರೀ ಗಣೇಶಚತುರ್ಥಿ ಮುಂತಾದವುಗಳು ಸಾಮೂಹಿಕ ವ್ರತಗಳಾಗಿವೆ.
8. **ಸ್ತ್ರೀ-ಪುರುಷ ಭೇದಕ್ಕನುಸಾರ** - ಬಹುತೇಕ ಎಲ್ಲ ವ್ರತಗಳನ್ನು ಸ್ತ್ರೀ-ಪುರುಷ ಇಬ್ಬರೂ ಮಾಡಬಹುದು; ಆದರೆ ಸ್ವರ್ಣಗೌರಿ, ವಟಸಾವಿತ್ರಿ ಇವುಗಳಂತಹ ವ್ರತಗಳು ಸ್ತ್ರೀಯರಿಗಾಗಿಯೇ ಇವೆ.
9. **ವರ್ಣಕ್ಕನುಸಾರ** - ಕೆಲವು ನಿರ್ದಿಷ್ಟ ವ್ರತಗಳು ಕೇವಲ ರಾಜರು, ಕ್ಷತ್ರಿಯರು ಅಥವಾ ವೈಶ್ಯರು ಮಾಡುವಂತಹವುಗಳಾಗಿವೆ.

## 6.2 ವ್ರತಾಚರಣೆ

ಇಷ್ಟಾರ್ಥ ಸಿದ್ಧಿಗಾಗಿ ನಾವು ಅನೇಕ ವ್ರತಗಳನ್ನಾಚರಿಸುತ್ತೇವೆ. ಸಾಮಾನ್ಯವಾಗಿ ವ್ರತಗಳನ್ನು ಆಚರಿಸುವಾಗ ಪಾಲಿಸಬೇಕಾದ ಕೆಲವು ವಿಷಯಗಳನ್ನು ಇಲ್ಲಿ ನೀಡಿದ್ದೇವೆ.

### 1. ವ್ರತದ ಪೂರ್ವಸಿದ್ಧತೆ

1.1. ವ್ರತನಿಯಮಗಳ ಅಧ್ಯಯನ : ಒಮ್ಮೆ ವ್ರತ ಮಾಡಬೇಕೆಂದು ನಿಶ್ಚಯಿಸಿದ ಮೇಲೆ ವ್ರತವನ್ನು ಪ್ರಾರಂಭಿಸುವ ಮೊದಲು, ವ್ರತ ಕಾಲದಲ್ಲಿ ಪಾಲಿಸಬೇಕಾದ ನಿಯಮಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕು.

1.2. ಶುಭದಿನವನ್ನು ನೋಡುವುದು : ಸಾಮಾನ್ಯವಾಗಿ ಎಲ್ಲ ವ್ರತಗಳನ್ನೂ ದಿನ ಶುದ್ಧಿ ಮತ್ತು ಗ್ರಹಗಳ ವಿಶಿಷ್ಟ ಸ್ಥಿತಿಯನ್ನು ನೋಡಿಯೇ ಪ್ರಾರಂಭಿಸಬೇಕಾಗುತ್ತದೆ. ಅಧಿಕ ಮಾಸದಲ್ಲಿ ಯಾವ ವ್ರತವನ್ನೂ ಮಾಡಬಾರದು, ಯಾವ ವ್ರತದ ಪರಿಹಾರವನ್ನೂ ಮಾಡಬಾರದು. ಅಶೌಚವಿರುವಾಗ ಮತ್ತು ವಾರ, ನಕ್ಷತ್ರ, ಯೋಗ ಇವು ಪ್ರತಿಕೂಲವಾಗಿರುವಾಗ ವ್ರತಾರಂಭ ಮಾಡಬಾರದು.

1.3. ವ್ರತದ ಬ್ರಾಹ್ಮಣನು ಹೇಗಿರಬೇಕು ? : ಬ್ರಾಹ್ಮಣನನ್ನು ವ್ರತಾಚರಣೆಯಲ್ಲಿನ ಒಂದು ಪ್ರಮುಖ ಸಾಧನವೆಂದು ಪರಿಗಣಿಸಲಾಗಿದೆ. ಈ ಬ್ರಾಹ್ಮಣನು ಶಾಂತ, ಸುಶೀಲ, ಸಮಾಧಾನಿ, ಸತ್ಯವಂತ, ವೇದಗಳ ಪರಿಪಾಲಕ, ಕೋಪಿಸಿಕೊಳ್ಳದವನೂ, ಭೂತದಯೆಯುಳ್ಳವನೂ ಆಗಿರಬೇಕು ಅಲ್ಲದೇ ಸಬ್ರಹ್ಮ ಕರ್ಮ, ಜಪತಪವನ್ನು ಮಾಡುವವನೂ ಮತ್ತು ನಿತ್ಯವೂ ಊಟಕ್ಕೆ ಮೊದಲು ದೇವತೆಗಳಿಗೆ ಹವಿಸ್ಸು (ಯಜ್ಞದಲ್ಲಿ ಅಗ್ನಿಗೆ ಆಹುತಿ) ಕೊಡುವವನಾಗಿರಬೇಕು.

1.4. ವ್ರತಾರಂಭದ ಹಿಂದಿನ ದಿನ : ಶೌಚಸ್ನಾನಾದಿ ನಿತ್ಯಕರ್ಮಗಳಾದ ನಂತರ ಮರುದಿನದ ವ್ರತದ ಸಿದ್ಧತೆ ಮಾಡಬೇಕು. ಹಗಲು ಹೊತ್ತು ಒಂದು ಬಾರಿ ಊಟ ಮಾಡಿ ರಾತ್ರಿ ಉತ್ಸಾಹದಿಂದ ನಿದ್ರಾಧೀನರಾಗಬೇಕು.

### 2. ವ್ರತವಿಧಾನ

2.1. **ವ್ರತಾರಂಭ** : ವ್ರತದ ದಿನದಂದು ಸೂರ್ಯೋದಯಕ್ಕೂ ಎರಡು ಘಟಿಕೆಗಳಷ್ಟು ಮುಂಚೆ ಎದ್ದು ಪ್ರಾತಃವಿಧಿ ಮತ್ತು ಸ್ನಾನಾದಿಗಳನ್ನು ಮಾಡಬೇಕು. ಬೆಳಗ್ಗೆ ಆಹಾರವನ್ನು ಸೇವಿಸದೆ ಸೂರ್ಯದೇವನಿಗೂ, ವ್ರತದೇವನಿಗೂ ತನ್ನ ಮನೋಕಾಮನೆಯನ್ನು ತಿಳಿಸಿ ವ್ರತ ಮಾಡಲು ಉದ್ಯುಕ್ತನಾಗಬೇಕು.

2.2. **ಪೂಜೆ ಮತ್ತು ಹೋಮ** : ಗಣಪತಿ, ಮಾತೃದೇವತೆ ಮತ್ತು ಪಂಚ ದೇವತೆಗಳನ್ನು ಸ್ಮರಿಸಿ ಪೂಜಿಸಬೇಕು. ವ್ರತದೇವತೆಯ ಬಂಗಾರದ ಪ್ರತಿಮೆಯನ್ನು ಮಾಡಿ ಅದನ್ನು ಯಥಾಶಕ್ತಿ ಪಂಚೋಪಚಾರ, ದಶೋಪಚಾರ ಅಥವಾ ಷೋಡಶೋಪಚಾರಗಳಿಂದ ಪೂಜಿಸಬೇಕು. ಮಾಸ, ಪಕ್ಷ, ತಿಥಿ, ವಾರ ಮತ್ತು ನಕ್ಷತ್ರ ಇವುಗಳ ಪೈಕಿ ಯಾವುದರ ವ್ರತವಿದೆಯೋ ಅದು ಅದರ ಅಧಿದೇವತೆಯಾಗಿರುತ್ತದೆ. ಉದಾ. ಪಾಡ್ಯ-ಅಗ್ನಿ, ದ್ವಿತೀಯಾ-ಬ್ರಹ್ಮ, ತೃತೀಯಾ-ಗೌರಿ ಇತ್ಯಾದಿ; ಅಶ್ವಿನಿ – ಅಶ್ವಿನಿ ಕುಮಾರರು, ಭರಣಿ- ಯಮ, ಕೃತ್ತಿಕಾ-ಅಗ್ನಿ ಇತ್ಯಾದಿ; ಹಾಗೆಯೇ ವಾರಗಳಲ್ಲಿ ಸೂರ್ಯ, ಸೋಮ ಮತ್ತು ಭೌಮ ಇತ್ಯಾದಿ ದೇವತೆಗಳು ವ್ರತದ ಅಧಿದೇವತೆಗಳಾಗುತ್ತಾರೆ. ವ್ರತದ ಅಧಿದೇವತೆಯ ಸಂಕಲ್ಪಪೂರ್ವಕ ಪೂಜೆಯು ಕ್ರಮಬದ್ಧವಾಗಿದೆ.

2.3. **ಪಾರಣೆ (ಉಪವಾಸ ಬಿಡುವುದು)** : ವ್ರತವನ್ನು ಪೂರ್ಣಗೊಳಿಸಿದ ನಂತರ ಉಪವಾಸ ಬಿಟ್ಟು ಅನ್ನ ಗ್ರಹಿಸುವುದನ್ನು ಪಾರಣೆ ಎನ್ನುತ್ತಾರೆ. ಈ ಭೋಜನವು ರುಚಿಕರವಾಗಿರಬೇಕು. ಅದನ್ನು ದೇವರಿಗೆ ಮಹಾನೈವೇದ್ಯವೆಂದು ಸಮರ್ಪಿಸಿ ಸೇವಿಸಬೇಕು. ಉದಾಹರಣೆಗೆ ಏಕಾದಶಿಯಂದು ಉಪವಾಸ ಮಾಡಿದ ನಂತರ ದ್ವಾದಶಿಯಂದು ಪಾರಣೆ ಮಾಡಲೇಬೇಕು. ಅಂದು ಉಪವಾಸ ಮಾಡಿದರೆ ಪಾಪ ತಗಲುತ್ತದೆ.

2.4. **ಉದ್ಯಾಪನೆ** : ವ್ರತವು ಪೂರ್ಣವಾದ ನಂತರ ಅದರ ಸಮಾಪ್ತಿಗಾಗಿ ಜಪ, ಹೋಮ, ಪೂಜೆ ಇತ್ಯಾದಿ ಕಾರ್ಯಗಳನ್ನು ಮಾಡಲಾಗುತ್ತದೆ. ಇವುಗಳನ್ನೆಲ್ಲ ಸೇರಿಸಿ ಉದ್ಯಾಪನೆ ಎನ್ನುತ್ತಾರೆ. ವ್ರತವು(ಬಹುಶಃ) ಕಾಮ್ಯವಾಗಿ ಇರುತ್ತದೆ ಅಂದರೆ ಯಾವುದಾದರೊಂದು ಉದ್ದೇಶದಿಂದ ಅದನ್ನು ಆಚರಿಸಲಾಗುತ್ತದೆ. ಮನಸ್ಸಿನಂತೆ ವ್ರತಾಚರಣೆಯಾದರೆ ಅವನಿಗೆ ಅತ್ಯಂತ ಸಮಾಧಾನವು ಸಿಗುತ್ತದೆ. ಆ ಅತ್ಯಂತ

ಸಮಾಧಾನದ ಪ್ರತೀಕವೇ ವ್ರತದ ಉದ್ಯಾಪನೆ, ಅಂದರೆ ವ್ರತದ ಸಮಾಪ್ತಿಯಾಗಿದೆ. ವ್ರತವು ನೆರವೇರಿದ ಮೇಲೆ ಯಥಾಶಕ್ತಿ ಉದ್ಯಾಪನೆ ಮಾಡಬೇಕು. ಉದ್ಯಾಪನೆ ಮಾಡದೆ ವ್ರತದ ಸಮಾಪ್ತಿಯಾಗುವುದಿಲ್ಲ. ವ್ರತದ ನಂತರ ಉದ್ಯಾಪನೆ ಮಾಡದಿದ್ದರೆ ವ್ರತವು ನಿಷ್ಫಲವಾಗುತ್ತದೆ. ಉದ್ಯಾಪನೆಯನ್ನು ಹೇಗೆ ಮಾಡಬೇಕು ಎನ್ನುವುದನ್ನು ಆಯಾಯ ವ್ರತದಲ್ಲಿ ಹೇಳಲಾಗಿರುತ್ತದೆ.

ಹಲವಾರು ವ್ರತಾದಿಗಳಿದ್ದು ನಾವು ಇಲ್ಲಿ ಕೆಲವು ವ್ರತಗಳ ಬಗ್ಗೆ ತಿಳಿಸಿರುತ್ತೇವೆ.

1. ಗೌರೀ ತ್ರತಿಯಾ ವ್ರತ - ಪ್ರತಿತಿಂಗಳು ಶುದ್ಧ ತದಿಗೆ
2. ಕಾರ್ತಿಕೇಯ ಸುಬ್ರಹ್ಮಣ್ಯ ವ್ರತ – ಪ್ರತಿತಿಂಗಳು ಶುದ್ಧ ಷಷ್ಠಿ
3. ಪ್ರದೋಷಂ ಮಾಸ ಶಿವರಾತ್ರಿ ವ್ರತ - ಪ್ರತಿತಿಂಗಳು ಬಹುಳ ತ್ರಯೋದಶಿ
4. ಸಂಕಷ್ಟಹರ ಗಣಪತಿ ವ್ರತ – ಪ್ರತಿತಿಂಗಳು ಬಹುಳ ಚತುರ್ಥಿ
5. ಸತ್ಯ ಗಣಪತಿ ಪೂಜಾ ವ್ರತ - ಪ್ರತಿತಿಂಗಳು ಶುದ್ಧ ಚತುರ್ಥಿ
6. ಸತ್ಯ ದತ್ತ ಪೂಜಾ ವ್ರತ - ಪ್ರತಿತಿಂಗಳು ಶುದ್ಧ ದ್ವಾದಶಿ
7. ಸತ್ಯ ನಾರಾಯಣ ಪೂಜಾ ವ್ರತ – ಪ್ರತಿತಿಂಗಳು ಹುಣ್ಣಿಮೆ, ಸಂಕ್ರಾಂತಿ
8. **ಅನಂತ ಪದ್ಮನಾಭ ವ್ರತ** - ಧರ್ಮ-ಅರ್ಥ-ಕಾಮ-ಮೋಕ್ಷಕ್ಕಾಗಿ ಪುತ್ರ-ಪೌತ್ರ ಅಭಿವೃದ್ಧಿಗಾಗಿ ಈ ವ್ರತವನ್ನು ಭಾದ್ರಪದ ಶುಕ್ಲ ಚತುರ್ದಶಿಯಂದು ಆಚರಿಸಬೇಕು.
9. **ಅಮವಾಸ್ಯೆ ಸೋಮವಾರ ವ್ರತ** (ಸೋಮವತಿ ಅಮವಾಸ್ಯೆ) ಅಮವಾಸ್ಯೆಯು ಸೋಮವಾರದ ದಿನ ಪ್ರಾಪ್ತವಾದಾಗ ಈ ವ್ರತವನ್ನು ಆಚರಿಸಬೇಕು. ಇದರಿಂದ ದೀರ್ಘಾಯುಷ್ಯವುಳ್ಳ ಸಂತತಿಯು ಪ್ರಾಪ್ತವಾಗುತ್ತದೆ.
10. **ಆಮುಕ್ತಾಭರಣ ಸಪ್ತಮಿ ವ್ರತ** ಬಂಜೆತನ ಪರಿಹಾರಕ್ಕಾಗಿ ಭಾದ್ರಪದ ಶುಕ್ಲ ಸಪ್ತಮಿಯ ದಿನ ಈ ವ್ರತವನ್ನು ಮಾಡಬೇಕು.
11. **ಉಪಾಂಗ ಲಲಿತಾ ವ್ರತ** - ಈ ವ್ರತವನ್ನು ಅಶ್ವೀಜ ಮಾಸದ ಶುಕ್ಲ ಪಂಚಮಿಯಂದು ಮಕ್ಕಳಿಗೆ ವಿದ್ಯಾ ಪ್ರಾಪ್ತಿಗಾಗಿ, ರೋಗ ನಿವೃತ್ತಿಗಾಗಿ, ಸುಖ, ವಿಜಯ ಪ್ರಾಪ್ತಿಗಾಗಿ ಈ ವ್ರತವನ್ನು ಮಾಡಬೇಕು.

12. **ಉಮಾ ಮಹೇಶ್ವರ ವೃತ** - ಈ ವೃತವನ್ನು ಭಾದ್ರಪದ ಶುದ್ಧ ಪೌರ್ಣಿಮೆಯ ದಿನ ಆಚರಿಸುತ್ತಾರೆ. ಇದರಿಂದ ಮನುಷ್ಯನ ಸಕಲ ಕಾಮ್ಯಗಳು ಸಿದ್ಧಿಯಾಗುತ್ತದೆ.
13. **ಋಷಿ ಪಂಚಮಿ ವೃತ** - ಕಾಯಕ, ವಾಚಿಕ, ಮಾನಸಿಕ, ಸಾಂಸರ್ಗಿಕ ಜ್ಞಾತ- ಅಜ್ಞಾತ ಸಮಸ್ತ ಪಾಪಕ್ಷಯಕ್ಕಾಗಿ ದಂಪತಿಗಳು ಈ ವೃತವನ್ನು ಭಾದ್ರಪದ ಶುಕ್ಲ ಪಂಚಮಿಯಂದು ಆಚರಿಸಬೇಕು.
14. **ಕೃಷ್ಣ ಜನ್ಮಾಷ್ಟಮೀ ವೃತ** - ಶ್ರಾವಣ ಮಾಸದ ಕೃಷ್ಣ ಪಕ್ಷದ ಅಷ್ಟಮಿಯಂದು ಶ್ರೀಕೃಷ್ಣನು ಭೂಮಿಯ ಮೇಲೆ ಅವತರಿಸಿದನು. ಈ ದಿನದಂದು ಎಲ್ಲಾ ಮನಸ್ಸಿನ ಕಾಮನೆ ಪೂರ್ತಿಗಾಗಿ ಈ ವೃತವನ್ನು ಮಾಡಬೇಕು.
15. **ಕೇದಾರೇಶ್ವರ ವೃತ** - ಆಶ್ವೀಜ ಮಾಸದ ಅಮವಾಸ್ಯೆಯ ದಿನದಂದು ಧರ್ಮ-ಅರ್ಥ-ಕಾಮ-ಮೋಕ್ಷ ಪ್ರಾಪ್ತಿ ಮತ್ತು ಪುತ್ರ-ಪೌತ್ರಾದಿ ಅಭಿವೃದ್ಧಿಗಾಗಿ ಆಚರಿಸಬೇಕು.
16. **ಕ್ಷೀರಾಬ್ಧಿ ದ್ವಾದಶಿ ವೃತ** - ಈ ವೃತವನ್ನು ಕಾರ್ತೀಕ ಶುದ್ಧ ದ್ವಾದಶಿ ದಿನ ಆಚರಿಸುತ್ತಾರೆ. ಇದರಿಂದ ಮನುಷ್ಯನ ಸಕಲ ಪಾಪಗಳು ವಿಮುಕ್ತಿಯಾಗಿ ಸಾಯುಜ್ಯವನ್ನು ಹೊಂದುತ್ತಾನೆ.
17. **ಗಜಗೌರೀ ವೃತ** - ಭಾದ್ರಪದ ಕೃಷ್ಣ ಅಷ್ಟಮಿಯಂದು ಕುಟುಂಬದ ಎಲ್ಲ ಮನೋಕಾಮನೆ ಪ್ರಾಪ್ತಿಗಾಗಿ, ಧರ್ಮ-ಅರ್ಥ-ಕಾಮ-ಮೋಕ್ಷ ಪ್ರಾಪ್ತಿಗಾಗಿ ಈ ವೃತವನ್ನು ಆಚರಿಸಬೇಕು.
18. **ಗೋ ಪದ್ಮ ವೃತ** - ಈ ವೃತವನ್ನು ಆಷಾಢ ಶುಕ್ಲ ಏಕಾದಶಿಯಿಂದ ಕಾರ್ತೀಕ ದ್ವಾದಶಿಯವರೆಗೂ ಆಚರಿಸಬಹುದು. ಈ ಚಾತುರ್ಮಾಸ್ಯ ವೃತವು ಸರ್ವ ದು:ಖ ಪರಿಹಾರವು, ಸಕಲ ಸೌಭಾಗ್ಯದಾಯಕವೂ ಆದುದು.
19. **ಜ್ಯೇಷ್ಠಾ ದೇವೀ ವೃತ** - ಭಾದ್ರಪದ ಶುಕ್ಲ ಅಷ್ಟಮಿ ದಿವಸ ಜ್ಯೇಷ್ಠಾ ನಕ್ಷತ್ರದಲ್ಲಿ ಈ ವೃತವನ್ನು ಮಾಡಬೇಕು. ಅಷ್ಟಮಿಯ ದಿನ ಜ್ಯೆಷ್ಠಾ ನಕ್ಷತ್ರ ಇಲ್ಲದಿದ್ದರೆ ಮಾರನೆಯ ದಿನ ಅನುರಾಧಾ ನಕ್ಷತ್ರದಲ್ಲಿ ಇದನ್ನು ಆಚರಿಸಬಹುದು. ಆವಾಹನೆ ಅನುರಾಧಾ ನಕ್ಷತ್ರದಲ್ಲಿ, ವಿಸರ್ಜನೆ ಮೂಲಾ

ನಕ್ಷತ್ರದಲ್ಲಿ ಆಗಬೇಕು. ಸ್ತ್ರೀಯರಿಗೆ ಸಕಲ ಸೌಭಾಗ್ಯ, ಧನಧಾನ್ಯ, ಐಶ್ವರ್ಯಾದಿಗಳನ್ನು ಕೂಡಲೇ ದಯಪಾಲಿಸುವ ವ್ರತವೇ ಜ್ಯೇಷ್ಠಾ ದೇವೀ ವ್ರತ.

20. **ನರಸಿಂಹ ಜಯಂತಿ ವ್ರತ** - ವೈಶಾಖ ಶುಕ್ಲ ಚತುರ್ದಶಿಯ ದಿನ ಮಾಡುವ ಈ ವ್ರತವು ಬ್ರಹ್ಮ ಹತ್ಯಾದಿ ಪಂಚಮಹಾ ಪಾತಕಗಳನ್ನು ನಿವಾರಿಸುತ್ತದೆ.
21. **ನಾಗಪಂಚಮಿ ವ್ರತ** ಇದನ್ನು ಶ್ರಾವಣ ಮಾಸದ ಶುಕ್ಲಪಂಚಮಿ ತಿಥಿಯಂದು ನಾಗರಾಜನ ಅನುಗ್ರಹ ಪ್ರಾಪ್ತಿಗಾಗಿ, ನಾಗ ದೋಷ ನಿವಾರಣೆಗಾಗಿ ಎಲ್ಲಾ ಮನೋಕಾಮನೆ ಪಡೆಯಲು ಆಚರಿಸಬೇಕು.
22. **ಭೀಮನ ಅಮವಾಸ್ಯೆ ವ್ರತ** (ಪತಿಸಂಜೀವಿನಿ ವ್ರತ) ಆಷಾಢ ಮಾಸದ ಅಮವಾಸ್ಯೆಯಂದು ವಿವಾಹಿತೆಯರು ಮತ್ತು ಅವಿವಾಹಿತೆಯರು ಸುದೀರ್ಘಕಾಲ ಸೌಮಾಂಗಲ್ಯ ಪ್ರಾಪ್ತಿಗಾಗಿ, ಆಯುಃರಾರೋಗ್ಯ ಐಶ್ವರ್ಯ ಪ್ರಾಪ್ತಿಗಾಗಿ ಈ ವ್ರತವನ್ನು ಸತತ 9 ವರ್ಷ ಮಾಡಬೇಕು.
23. **ಮಂಗಳಗೌರಿ ವ್ರತ** - ಮದುವೆಯಾದ ನವ ವಧುವು ಪತಿಯ ಆಯುಷ್ಯ ಅಭಿವೃದ್ಧಿಗಾಗಿ, ಸುದೀರ್ಘ ಕಾಲ ಸೌಮಾಂಗ್ಯ ಪ್ರಾಪ್ತಿಗಾಗಿ ಶ್ರಾವಣ ಮಾಸದಲ್ಲಿ ಬರುವ ಯಾವುದಾದರೂ ಮಂಗಳವಾರ ಸತತ 5 ವರ್ಷ ಆಚರಿಸಬೇಕು.
24. **ಮಹಾಶಿವರಾತ್ರೀ ವ್ರತ** - ಮಾಘ ಮಾಸದ ಕೃಷ್ಣ ಪಕ್ಷದ ಚತುರ್ದಶಿ ದಿನದಂದು ಶಿವ-ಪಾರ್ವತಿಯರು ಒಂದಾದ ದಿನ. ಈ ದಿನದಂದು ಶಿವಾರಾಧನೆ ಮಾಡಿದರೆ ಎಲ್ಲಾ ಪಾಪವು ಕ್ಷಯವಾಗುತ್ತದೆ. ಅಲ್ಲದೆ ಎಲ್ಲ ಮನೋಕಾಮನೆ ಪ್ರಾಪ್ತಿಗಾಗಿ ಈ ವ್ರತವನ್ನು ಮಾಡಬೇಕು.
25. **ಮಾರ್ಗಶಿರ ಮಹಾಲಕ್ಷ್ಮೀ ವ್ರತ** - ಮಾರ್ಗಶಿರ ಮಾಸದ ಮುಖ್ಯವಾದ ಗುರುವಾರದ ದಿನ ಆಚರಿಸುವ ಈ ವ್ರತವು ಸ್ತ್ರೀಯರು ಆಚರಿಸತಕ್ಕ ವ್ರತಗಳಲ್ಲಿ ಅತ್ಯಂತ ಉತ್ತಮವಾಗಿದ್ದು, ಪುತ್ರ ಪೌತ್ರಾದಿ ಸಂಪತ್ತುಗಳನ್ನು ಕೊಡತಕ್ಕದ್ದಾಗಿದೆ.

26. **ಮಾಸ ಶಿವರಾತ್ರಿ ವ್ರತ** - ಪ್ರತಿ ತಿಂಗಳಿನ ಕೃಷ್ಣ ಪಕ್ಷದ ಚತುರ್ದಶಿಯ ದಿನದಂದು ಜನ್ಮ ಜನ್ಮಾಂತರದಲ್ಲಿ ಮಾಡಿದ ಪಾಪ ಕ್ಷಯವಾಗಿ ಮನೋಕಾಮನೆಯನ್ನು ಪಡೆಯಲು ಈ ವ್ರತವನ್ನು ಮಾಡಬೇಕು.

27. **ರಥ ಸಪ್ತಮಿ ವ್ರತ** - ಸಕಲ ರೋಗ ಪರಿಹಾರಕ್ಕಾಗಿ ಮಾಘ ಶುಕ್ಲ ಷಷ್ಠಿಯ ದಿನ ಈ ವ್ರತವನ್ನು ಆಚರಿಸಬೇಕು.

28. **ರಾಮ ನವಮೀ ವ್ರತ** - ಈ ವ್ರತವನ್ನು ಚೈತ್ರ ಶುದ್ಧ ನವಮಿಯ ದಿನ ಆಚರಿಸುತ್ತಾರೆ. ಇದು ಮನುಷ್ಯನ ಅನೇಕ ಜನ್ಮಗಳ ಪಾಪವನ್ನು ಪರಿಹರಿಸುತ್ತದೆ.

29. **ವಟ ಸಾವಿತ್ರಿ ವ್ರತ** - ಜ್ಯೇಷ್ಠ ಮಾಸದ ಹುಣ್ಣಿಮೆಯ ದಿನದಂದು ಸ್ತ್ರೀಯರು ತಮ್ಮೆಲ್ಲ ಮನೋಕಾಮನೆಗಳನ್ನು, ದೀರ್ಘ ಸೌಮಾಂಗಲ್ಯ ಪ್ರಾಪ್ತಿಗಾಗಿ ಈ ವ್ರತವನ್ನು ಮಾಡಬೇಕು.

30. **ವರಮಹಾಲಕ್ಷ್ಮಿ ವ್ರತ** - ಶ್ರಾವಣ ಮಾಸದ ಶುಕ್ಲ ಪಕ್ಷದ 2ನೇ ಶುಕ್ರವಾರದಂದು ಸುವಾಸಿನಿಯರು ಸಕಲ ಸೌಭಗ್ಯ ಪ್ರಾಪ್ತಿಗಾಗಿ ಈ ವ್ರತವನ್ನು ಮಾಡಬೇಕು.

31. **ವರಸಿದ್ಧಿವಿನಾಯಕ ವ್ರತ** - ಭಾದ್ರಪದ ಶುಕ್ಲ ಚತುರ್ಥಿಯಂದು ಮಣ್ಣಿನಿಂದ ಗಣಪತಿ ವಿಗ್ರಹವನ್ನು ಮಾಡಿ, ಭಕ್ತಿ- ಶ್ರದ್ಧೆಯಿಂದ ಪೂಜಿಸುವ ವ್ರತ. ಇದನ್ನು 1, 3, 5, 7, 9 ದಿನಗಳವರೆಗೆ ಆಚರಿಸುವ ಪದ್ಧತಿ ಇದೆ.

32. **ವೈಕುಂಠ ಚತುರ್ದಶೀ ವ್ರತ** - ಕಾರ್ತಿಕ ಮಾಸದ ಶುಕ್ಲ ಪಕ್ಷದ ಚತುರ್ದಶೀ ದಿನದಂದು ಜನ್ಮ-ಜನ್ಮಾಂತರೇಣ ಮಾಡಿದ ಪಾಪ ಪರಿಹಾರಕ್ಕಾಗಿ ಈ ವ್ರತವನ್ನು ಮಾಡಬೇಕು.

**33. ಶಂಕರ ಜಯಂತಿ ವ್ರತ** – ಜಗದ್ಗುರು ಶಂಕರಾಚಾರ್ಯರ ಜನ್ಮದಿನವಾದ ವೈಶಾಖ ಶುಕ್ಲ ಪಂಚಮಿ ದಿನ ಮಾಡುವ ಈ ವ್ರತವು ಸಕಲ ಇಷ್ಟಾರ್ಥ ಪ್ರಾಪ್ತಿ ಮತ್ತು ಎಲ್ಲಾ ಪಾತಕಗಳನ್ನು ನಿವಾರಿಸುತ್ತದೆ.

34. **ಶನಿ ಪ್ರದೋಷ ವ್ರತ ಶನಿ ತ್ರಯೋದಶಿ** - ಎಂಬ ಈ ವ್ರತವನ್ನು ಶ್ರಾವಣ ಅಥವಾ ಕಾರ್ತೀಕ ಮಾಸದ ಶುಕ್ಲ ಪಕ್ಷದಲ್ಲಿ ತ್ರಯೋದಶಿಯು ಶನಿವಾರವಾಗಿಯೂ,

ಜಯನಾಮ ಯೋಗವಾಗಿಯೂ ಇರುವಾಗ ಋಣ ದಾರಿದ್ರ್ಯ, ಕಷ್ಟ ನಿವಾರಣೆಗಾಗಿ ಆಚರಿಸಬೇಕು.

35. **ಶರನ್ನವರಾತ್ರಿ ವೃತ** - ಅಶ್ವೀಜ ಶುಕ್ಲ ಪ್ರತಿಪದೆಯಿಂದ ಮಹಾ ನವಮಿಯವರೆಗೆ ಉಪವಾಸವಿದ್ದು ಜಗನ್ಮಾತೆಯ ಅನುಗ್ರಹಕ್ಕಾಗಿ, ಎಲ್ಲಾ ಮನೋಕಾಮನೆಗಳ ಪ್ರಾಪ್ತಿಗಾಗಿ ಈ ವೃತವನ್ನು ಭಕ್ತಿ-ಶ್ರದ್ಧೆಯಿಂದ ಮಾಡಬೇಕು.

36. **ಶ್ರವಣ ದ್ವಾದಶಿ ವೃತ** - ಈ ವೃತವನ್ನು ಶ್ರವಣಾ ನಕ್ಷತ್ರಯುತವಾದ ದ್ವಾದಶಿ ದಿನ ಆಚರಿಸುತ್ತಾರೆ. ಇದರಿಂದ ಸಕಲ ಪಾಪಗಳು ನಾಶವಾಗಿ ಸನ್ಮಂಗಲ ಉಂಟಾಗುತ್ತದೆ.

37. **ಸಂಕಷ್ಟಹರ ಚತುರ್ಥಿ ವೃತ** - ಮನುಷ್ಯನ ಸಕಲ ಕಷ್ಟಗಳನ್ನು, ಸಂಕಷ್ಟಗಳನ್ನು ಪರಿಹಾರ ಮಾಡತಕ್ಕ ಸಂಕಟಹರ ಗಣಪತಿ ವೃತವನ್ನು ಪ್ರತೀ ಮಾಸದಲ್ಲಿಯೂ ಕೃಷ್ಣ ಚೌತಿಯ ದಿನ ಆಚರಿಸಬೇಕು.

**38. ಸತ್ಯ ದತ್ತಾತ್ರೇಯ ವೃತ -** ಸಕಲ ಇಷ್ಟಾರ್ಥ ಪ್ರಾಪ್ತಿಗಾಗಿ ಯಾವಾಗ ಈ ವೃತವನ್ನು ಮಾಡಬೇಕೆಂದು ಮನಸ್ಸಿಗೆ ಬರುವುದೋ ಆ ದಿನವಾಗಲಿ ಅಥವಾ ಪೂರ್ಣಿಮಾ, ಸಂಕ್ರಾಂತಿ ಮೊದಲಾದ ದಿನಗಳಲ್ಲಿ ಪ್ರದೋಷ ಕಾಲದಲ್ಲಿ ಈ ವೃತವನ್ನು ಆಚರಿಸಬೇಕು.

39. **ಸತ್ಯ ನಾರಾಯಣ ವೃತ** - ಸಕಲ ಇಷ್ಟಾರ್ಥ ಪ್ರಾಪ್ತಿಗಾಗಿ ಯಾವಾಗ ಈ ವೃತವನ್ನು ಮಾಡಬೇಕೆಂದು ಮನಸ್ಸಿಗೆ ಬರುವುದೋ ಆ ದಿನವಾಗಲಿ ಅಥವಾ ಪೂರ್ಣಿಮಾ, ಸಂಕ್ರಾಂತಿ ಮೊದಲಾದ ದಿನಗಳಲ್ಲಿ ಪ್ರದೋಷ ಕಾಲದಲ್ಲಿ ಈ ವೃತವನ್ನು ಆಚರಿಸಬೇಕು.

40. **ಸರಸ್ವತೀ ವೃತ** - ಅಶ್ವೀಜ ಶುಕ್ಲ ನವರಾತ್ರಿಯಲ್ಲಿ ಬರುವ ಮೂಲಾ ನಕ್ಷತ್ರದಂದು ವಿದ್ಯಾ ಪ್ರಾಪ್ತಿಗಾಗಿ ಈ ವೃತವನ್ನು ಮಾಡಬೇಕು.

41. **ಸ್ವರ್ಣಗೌರೀ ವೃತ** - ಭಾದ್ರಪದ ಮಾಸದ ಶುಕ್ಲ ತೃತೀಯದಂದು ಶ್ರೀ ದೇವಿಯ ಅನುಗ್ರಹ ಪ್ರಾಪ್ತಿಗಾಗಿ ಚಿಂತಿತ ಮನೋಕಾಮನೆ ಪ್ರಾಪ್ತಿಗಾಗಿ ಈ ವೃತವನ್ನು ಮಾಡಬೇಕು.

42. **ಹದಿನಾರು ಸೋಮವಾರ ವೃತ** - ಈ ವೃತವನ್ನು ಪರಶಿವನ ಅನುಗ್ರಹ ಪ್ರಾಪ್ತಿಗಾಗಿ, ವಿವಾಹವಾಗಲೆಂದು, ಪುತ್ರ-ಪೌತ್ರಾದಿ ಅಭಿವೃದ್ಧಿಗಾಗಿ, ಕಾರ್ಯದಲ್ಲಿ ವಿಜಯಕ್ಕಾಗಿ, ಲಕ್ಷ್ಮೀ ಪ್ರಾಪ್ತಿಗಾಗಿ ಹೀಗೆ ಎಲ್ಲ ಮನೋಕಾಮನೆಗಳನ್ನು ಪಡೆಯಲು ಆಚರಿಸಬೇಕು.
43. **ಹನುಮ ಜಯಂತಿ ವೃತ** - ಹನುಮಂತನ ಜನ್ಮದಿನವಾದ ಮಾರ್ಗಶಿರ ಶುದ್ಧ ತ್ರಯೋದಶಿ ಮೂಲಾ ನಕ್ಷತ್ರದಲ್ಲಿ ಈ ವೃತವನ್ನು ಆಚರಿಸುತ್ತಾರೆ. ಇದರಿಂದ ಜ್ಞಾನ, ಬಲ, ತೇಜಸ್ಸು, ನಿರ್ಭಯ ಸಿದ್ಧಿಯಾಗುತ್ತದೆ.
44. **ಹರಿತಾಳಕ ಗೌರೀ ವೃತ** - ಭಾದ್ರಪದ ಮಾಸದ ತದಿಗೆಯ ದಿನ ಹಸ್ತಾ ನಕ್ಷತ್ರದಂದು ಸೌಭಾಗ್ಯವೂ, ಸಮಸ್ತ ಪಾಪ ಪರಿಹರಿಸುವಂತ, ಅಲ್ಪ ಪ್ರಯಾಸದಿಂದ ಅಧಿಕ ಫಲಕ್ಕಾಗಿ ಈ ವೃತವನ್ನು ಮಾಡಬೇಕು.

ಈ ರೀತಿಯಾಗಿ ಹಲವಾರು ವೃತಾದಿಗಳಿದ್ದು ಪುರಾಣ ಹಾಗೂ ಶಾಸ್ತ್ರಗಳಲ್ಲಿ ವಿಧಿಸಿದಂತೆ ಆಯಾಯ ದಿನಗಳಲ್ಲಿ ಮಾಡಬೇಕಾಗುತ್ತದೆ. ಇದರಿಂದ ಎಲ್ಲಾ ವಿಧವಾದ ಮನೋಕಾಮನೆಗಳು ಪೂರ್ಣವಾಗುತ್ತದೆ.

----- ****** -----

# 7 ಯಜ್ಞ-ಯಾಗಾದಿಗಳು

ಮಾನವರಾದ ನಾವುಗಳು ಎಷ್ಟು ಜನ್ಮವೆತ್ತಿ ಏನೇನು ಮಾಡಿ ಈ ಜನ್ಮದಲ್ಲಿ ಹೀಗಿದ್ದೇವೆ ಎಂಬುದು ನಮಗೆ ತಿಳಿಯದ ವಿಷಯ. ಆದರೆ ನಮ್ಮಲ್ಲಿರುವ ಆತ್ಮಚೈತನ್ಯಕ್ಕೆ ಎಲ್ಲವೂ ತಿಳಿದಿದೆ. ಆ ಚೇತನವು ಸುಮ್ಮನಿದ್ದು, ನಮ್ಮ ಕರ್ಮಫಲವು ನಮ್ಮಿಂದ ಒಳ್ಳೆಯದನ್ನು, ಕೆಟ್ಟದನ್ನು ಮಾಡಿಸುತ್ತದೆ. ಆದರೆ ಯಾವಾಗ ಕೆಟ್ಟಕರ್ಮದ ಫಲವು ಕಡಿಮೆ ಆಗುವುದೋ, ಆಗ ನಮ್ಮ ಸರ್ವಾಂಗೀಣ ಅಭಿವೃದ್ಧಿ ನಿಶ್ಚಿತ. ಅದಕ್ಕಾಗಿ ನಮಗೆ ಋಷಿ-ಮುನಿಗಳು ಅನೇಕ ಮಾರ್ಗದರ್ಶನಗಳನ್ನು ಮಾಡಿರುವರು. ಅವುಗಳಲ್ಲಿ ಮಹತ್ತರವಾದವುಗಳೆಂದರೆ ಯಜ್ಞ-ಯಾಗಾದಿಗಳು. ಇವುಗಳಲ್ಲಿ ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣುಗಳಾದ ಪಂಚಾಯತನ ದೇವತೆಗಳನ್ನು ಉದ್ದೇಶಿಸಿ ಮಾಡುವ ಪೂಜೆ, ಜಪ, ಹೋಮ, ತರ್ಪಣ, ಮಾರ್ಜನ, ಬ್ರಾಹ್ಮಣ-ಭೋಜನಗಳಿಂದ ಮಾಡುವ ವಿಶೇಷ ಅನುಷ್ಠಾನಕ್ಕೆ ಯಜ್ಞ-ಯಾಗಾದಿಗಳು ಎನ್ನಬಹುದು.

1. **ಸೂರ್ಯ** - ಸಂತತಿ ಪ್ರಾಪ್ತಿಗಾಗಿ, ಮೋಕ್ಷ ಪ್ರಾಪ್ತಿಗಾಗಿ, ಲೋಕ ಕಲ್ಯಾಣಕ್ಕಾಗಿ, ರೋಗ ನಿವೃತ್ತಿಗಾಗಿ ಗಾಯತ್ರಿ ಪುರಶ್ಚರಣ ಯಾಗವನ್ನು ಮಾಡಬೇಕು. ಹೀಗೆ ಎಲ್ಲಾ ಮನೋಕಾಮನೆಗಳನ್ನು ಪೂರೈಸಿಕೊಳ್ಳಲು ಈ ಯಾಗವನ್ನು ಮಾಡಬೇಕು.
2. **ಗಣಪತಿ** - ಕೈಗೆತ್ತಿಕೊಳ್ಳುವ ಕಾರ್ಯದಲ್ಲಿ ಬರುವಂತಹ ವಿಘ್ನ ನಿವಾರಣೆಗಾಗಿ, ಮಕ್ಕಳಿಗೆ ವಿದ್ಯಾಭ್ಯಾಸ ಸಲುವಾಗಿ, ಲಕ್ಷ್ಮೀ ಪ್ರಾಪ್ತಿಗಾಗಿ, ಉದ್ಯೋಗದಲ್ಲಿ ಯಶ ಪ್ರಾಪ್ತಿಗಾಗಿ ಮತ್ತು ಈ ರೀತಿಯ ಎಲ್ಲ ಮನೋಕಾಮನೆಗಳನ್ನು ಪಡೆಯಲು ಚತುರ್ದ್ರವ್ಯ (ಮೋದಕ, ದೂರ್ವಾ, ಲಾಜಾ, ತುಪ್ಪ)ದಿಂದ ಗಣೇಶ ಯಾಗವನ್ನು ಮಾಡಬೇಕು.
3. **ದುರ್ಗಾಂಬಿಕಾ** " ಕುಪುತ್ರೋ ಜಾಯೇತ್ ಕ್ವಚಿದಪಿ ಕುಮಾತಾನ್ನ ಭವತಿ." ಎಂಬ ಶಂಕರರ ಉಕ್ತಿಯಂತೆ ತಾಯಿಯೇ ನಮಗೆ ಸರ್ವಸ್ವ. ತಾಯಿಯು ಮಕ್ಕಳ ಎಲ್ಲಾ ಮನೋಕಾಮನೆಗಳನ್ನು ಭಕ್ತಿಯಿಂದ ಬೇಡಿದಲ್ಲಿ ಅದನ್ನು ನಿಸ್ಸಂದೇಹವಾಗಿ

ಪೂರೈಸುತ್ತಾಳೆ. ಆ ತಾಯಿಯನ್ನು ಒಲಿಸಿಕೊಳ್ಳಲು ಅನೇಕ ವಿಧವಾದ ಅನುಷ್ಠಾನಗಳಿವೆ. ಅವುಗಳಲ್ಲಿ ನವಚಂಡಿ, ಶತಚಂಡಿ, ಸಹಸ್ರಚಂಡಿ, ಆಯುತಚಂಡಿ ಯಾಗಗಳು ಪ್ರಮುಖವಾದವು. ಅದ್ದರಿಂದ ನಮ್ಮ ಶಕ್ತ್ಯಾನುಸಾರವಾಗಿ, ನಮ್ಮ ಮನೋಕಾಮನೆಗಳ ಪೂರ್ತಿಗಾಗಿ ಈ ಯಾಗಗಳನ್ನು ಮಾಡಬೇಕು.

4. **ಶಿವ** ಈ ಜಗತ್ತಿನಲ್ಲಿ ಜನಿಸಿದ ಸರ್ವವು ಶಿವಾಧೀನ. ಹುಟ್ಟು-ಸಾವುಗಳೂ ಅವನದೇ. ಶಿವನೇ ತಂದೆ. ಹೀಗಾಗಿ ಎಲ್ಲಾವಿಧ ಪಾಪ ನಿವೃತ್ತಿಗಾಗಿ, ಸಂತತಿ ಪ್ರಾಪ್ತಿಗಾಗಿ, ಲಕ್ಷ್ಮಿ ಪ್ರಾಪ್ತಿಗಾಗಿ, ಸದ್ಗತಿ ಪ್ರಾಪ್ತಿಗಾಗಿ, ಧರ್ಮ, ಅರ್ಥ, ಕಾಮ, ಮೋಕ್ಷಾದಿಗಳನ್ನು ಪಡೆಯಲು ಶಿವನನ್ನೇ ಆರಾಧಿಸಬೇಕು. ಶಿವನನ್ನು ಒಲಿಸಲು ಅನೇಕ ವಿಧವಾದ ಆರಾಧನೆಗಳಿವೆ. ಶತರುದ್ರ ಪುರಶ್ಚರಣ, ಮಹಾರುದ್ರ ಪುರಶ್ಚರಣ, ಅತಿರುದ್ರ ಪುರಶ್ಚರಣ, ಕೈಲಾಸ ಯಂತ್ರ, ಸಹಸ್ರ ಲಿಂಗತೋ ಭದ್ರ ಮಹಾಯಂತ್ರ, ಪ್ರಮುಖವಾದುದು.

5. **ವಿಷ್ಣು** "ಸರ್ವದೇವ ನಮಸ್ಕರಂ ಕೇಶವಂ ಪ್ರತಿಗಚ್ಛತಿ". ನಮ್ಮ ಸಂಸ್ಕೃತಿಯಲ್ಲಿ ಹಲವಾರು ದೇವತೆಗಳನ್ನು ಆರಾಧಿಸುತ್ತೇವೆ. ಆದರೆ ಎಲ್ಲಾ ದೇವತೆಗಳಿಗೂ ಮೂಲ ಮಹಾವಿಷ್ಣು. ವಿಷ್ಣು ಜ್ಞಾನದ ರೂಪ. ಧರ್ಮ, ಅರ್ಥ, ಕಾಮ, ಮೋಕ್ಷ ಎಲ್ಲಾ ಮನೋಕಾಮನೆಗಳ ಸಾಧನೆಗಾಗಿ ಮಹಾವಿಷ್ಣುವಿನ ದಶರೂಪಗಳನ್ನು ಆರಾಧಿಸುತ್ತೇವೆ. ಹೀಗೆ ಎಲ್ಲ ಮನೋಕಾಮನೆಗಳ ಪೂರ್ಣತೆಗಾಗಿ ವಿಷ್ಣು ಪ್ರೀತ್ಯರ್ಥವಾಗಿ ಪುರುಷ ಸೂಕ್ತ ಪುರಶ್ಚರಣ ಹೋಮ, ಸುದರ್ಶನ ಹೋಮ, ಉಗ್ರ ನರಸಿಂಹ ಹೋಮ, ರಾಮತಾರಕ ಹೋಮ, ಸುಂದರಕಾಂಡ, ಅಷ್ಟಾಕ್ಷರಿ ಮಹಾಮಂತ್ರ ಜಪ ಹೋಮಾದಿ ಮಾಡಿಸಬೇಕು.

6. **ಸೋಮ ಯಾಗ** - ಪಾಪ ನಿವೃತ್ತಿ ಮತ್ತು ಇಚ್ಛಿತ ಮನೋಕಾಮನೆ ಪ್ರಾಪ್ತಿಗಾಗಿ ಮಾಡಬೇಕು.

7. **ಪುತ್ರಕಾಮೇಷ್ಠಿ ಯಾಗ** - ಮಕ್ಕಳನ್ನು ಪಡೆಯಲು ಮಾಡುವ ಅತೀದೊಡ್ಡ ವಿಧಿ.

8. **ಗರುಡ ಚಯನ ಮಹಾಯಾಗ** - ಪಾಪ ನಿವೃತ್ತಿ, ಲೋಕಕಲ್ಯಾಣಾರ್ಥವಾಗಿ ಮಾಡಬೇಕು.

9. **ರಾಜ ಸೂಯಯಾಗ ಮತ್ತು ಅಶ್ವಮೇಧ ಯಾಗ** ಇವುಗಳನ್ನು ಈಗ ಕಾಲದಲ್ಲಿ ಮಾಡಿಸುವುದಿಲ್ಲ. ಹಿಂದಿನ ಕಾಲದಲ್ಲಿ ಮಹಾರಾಜರುಗಳು ಮಾಡಿಸುತ್ತಿದ್ದರು.
10. **ಚಾಂದ್ರಾಯಣ ಪ್ರಯೋಗ** ಘೋರ ಪಾಪಗಳಾದ ಮಾತೃ ಹತ್ಯೆ, ಪಿತೃ ಹತ್ಯೆ, ಗೋ ಹತ್ಯೆ, ಬ್ರಾಹ್ಮಣ ಹತ್ಯೆ ಮುಂತಾದ ಸರ್ವ ಘೋರ ಪಾಪಗಳನ್ನು ಮಾಡಿದಲ್ಲಿ ಇದನ್ನು ಮಾಡಬೇಕು. ಇದು ತುಂಬಾ ಕಠಿಣವಾದ ಪ್ರಯೋಗವಾಗಿರುತ್ತದೆ.

----- ****** ----

# 8 ದೇವತಾ ಪ್ರತಿಷ್ಠಾಪನೆ

"ದೈವಾದೀನಂ ಜಗತ್ ಸರ್ವಂ" ಈ ಜಗತ್ತಿನಲ್ಲಿ ಇರುವ ಎಲ್ಲಾ ಚರಾಚರಗಳು ಭಗವಂತನೆಂಬ ಮೂಲ ಶಕ್ತಿಯಿಂದಲೇ ನಡೆಯುತ್ತಿವೆ. ತಮ್ಮ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿವೆ. ನಾವು ಆ ಶಕ್ತಿಯನ್ನು ಎಲ್ಲದರಲ್ಲೂ ಕಾಣುತ್ತೇವೆ. ಈ ಪ್ರಕೃತಿಯೇ ಭಗವಂತನು ನಮಗೆ ಕೊಟ್ಟ ವರದಾನ. ಆದರೂ ನಾವು ಮಂದಿರವನ್ನು ನಿರ್ಮಾಣ ಮಾಡಿ ನಮ್ಮ ಐಚ್ಛಿಕ ದೇವರ ಮೂರ್ತಿಯನ್ನು ಸ್ಥಾಪಿಸುತ್ತೇವೆ. ದೇವತೆಗಳ ಸ್ಥಾಪನೆಗೆ ಸಂಬಂಧಿಸಿದಂತೆ ಅನೇಕ ಗ್ರಂಥ ಹಾಗೂ ಪುರಾಣಗಳಲ್ಲಿ ನಿಯಮಗಳನ್ನು ತಿಳಿಸಿವೆ. ಹೀಗೆ ಇರಬೇಕು, ಇರಬಾರದು ಎಂಬುದರ ಹಿಂದೆ ಪ್ರಾಕೃತಿಕ ಮಹತ್ವವಿದೆ. ಎರಡನೇಯದಾಗಿ ನಮ್ಮ ಸಂಸ್ಕೃತಿಯಲ್ಲಿ ಅನೇಕ ದೇವರುಗಳನ್ನು ಕಾಣುತ್ತೇವೆ. ಆದರೆ ಕೆಲವರು ಯಾವುದೋ ಒಂದೇ ಶಕ್ತಿಯನ್ನು ಆರಾಧಿಸುತ್ತಾರೆ. ಇದೂ ಸರಿ, ಅದೂ ಸರಿಯೇ. ಇರುವುದು ಒಂದೇ ಶಕ್ತಿ. ನಮ್ಮ ಇಚ್ಛೆಯನ್ನು ಪೂರೈಸಿಕೊಳ್ಳಲು ಬೇರೆ ಬೇರೆ ರೂಪದಲ್ಲಿ ಆರಾಧಿಸುತ್ತಿದ್ದೇವೆ. (ಉದಾಹರಣೆಗೆ- ನಾವು ಬಳಸುವ ವಿದ್ಯುತ್ ಶಕ್ತಿಯು ಮೂಲ ಶಕ್ತಿಗಾಗಿ ನಮಗೆ ಬೇಕಾದ ತರಹ ಅಂದರೆ ದೀಪಕ್ಕಾಗಿ, ಗಾಳಿಗಾಗಿ(ಪಂಕ) ಕಠಿಣವಾದ ವಸ್ತು ಕತ್ತರಿಸುವಲ್ಲಿ ಕರಗಿ ನೀರಾಗಿಸುವ ಬೆಂಕಿಯಾಗಿ, ಆಹಾರ ತಯಾರಿಸುವ ಶಕ್ತಿಯಾಗಿ, ಹೀಗೆ ಎಷ್ಟೋ ವಿಧವಾಗಿ ಬಳಸುತ್ತೇವೆ.) ಆದರೆ ಮೂಲ ಶಕ್ತಿ ಮಾತ್ರ ವಿದ್ಯುತ್. ಹೀಗೆ ಭಗವಂತನ ರೂಪ

ಹಲವು, ಆದರೆ ಮೂಲ ಶಕ್ತಿ ಒಂದೇ. ಮೂರನೇಯದಾಗಿ ದೇವತಾ ವಿಗ್ರಹಗಳಲ್ಲಿ, ಕುಳಿತ ವಿಗ್ರಹ, ನಿಂತಿರುವ ವಿಗ್ರಹ, ಮಲಗಿರುವ ವಿಗ್ರಹ ಎಂದು ಪ್ರಕಾರಗಳಿವೆ. ಕೆಲವು ಕುಳಿತ ದೇವರುಗಳ ವಿಗ್ರಹಗಳು ಶ್ರೇಷ್ಠ, ಮತ್ತೆ ಕೆಲವು ನಿಂತ ವಿಗ್ರಹಗಳು ಶ್ರೇಷ್ಠ. ವಿಗ್ರಹವನ್ನು ಪ್ರತಿಷ್ಠಾಪನೆಗೆ ಬಳಸುವುದಾದಲ್ಲಿ ಕಲ್ಲಿನ ವಿಗ್ರಹ(ಕಪ್ಪು ಪಾಷಾಣ), ಚಿನ್ನ, ಬೆಳ್ಳಿ, ಪಂಚಲೋಹದ ವಿಗ್ರಹಗಳು ಉತ್ತಮ. ಮರದ ವಿಗ್ರಹಗಳನ್ನು ಬಳಸಬಹುದು. ಆದರೆ ಚಿತ್ರ ಬರೆದವು, ಗಾಜಿನ ವಿಗ್ರಹಗಳು ಪ್ರತಿಷ್ಠೆಗೆ ಯೋಗ್ಯವಲ್ಲ. ಮೂರ್ತಿಪ್ರತಿಷ್ಠೆಯನ್ನು ಮಾಡುವಾಗ ಪ್ರಾಕೃತಿಕವಾಗಿ ತಯಾರಿಸಿದ ಅಷ್ಠಬಂಧವೆಂಬ ದ್ರವ್ಯವನ್ನೇ ಬಳಸಬೇಕು. ಬಿಳಿ ಸಿಮೆಂಟನ್ನು ಬಳಸಬಾರದು. ಪ್ರತಿಷ್ಠಾಪನೆಗೆ ಮುನ್ನ ಮೂರ್ತಿಯ ಕೆಳಗೆ ಆ ದೇವರ ಯಂತ್ರ, ಸುವರ್ಣ, ನವರತ್ನಗಳನ್ನು ಹಾಕಬೇಕು. ಪ್ರತಿಷ್ಠಾಪಿಸಿದ 48 ದಿನ, ಒಂದು ಮಂಡಲಗಳ ಕಾಲ ಜಲವನ್ನು ಪ್ರೋಕ್ಷಣೆ ಮತ್ತು ಷೋಡಷ ಉಪಚಾರಾದಿಗಳನ್ನು ಮತ್ತು ಮಹಾಪೂಜಾದಿಗಳನ್ನು ಮಾಡಬಹುದು. 48ನೇ ದಿನ ಅಭಿಷೇಕಾದಿ ಮಹಾಪೂಜೆಯನ್ನು ಮಾಡಬೇಕು. ಆಮೇಲೆ 12ನೇ ವರ್ಷವಾದಾಗ ಪುನಃ ಪ್ರತಿಷ್ಠೆಯ ಬ್ರಹ್ಮ ಕಲಶೋತ್ಸವ ಆದಿಗಳನ್ನು ಮಾಡಿಸಬೇಕು. ದೇವತಾ ಪ್ರತಿಷ್ಠೆಗಾಗಿ ಬಳಸುವ ಅಷ್ಠಬಂಧ ಮಾಡುವ ವಿಧಾನ ಮತ್ತು ದ್ರವ್ಯಗಳು. ಒಳ್ಳೆಣ್ಣೆ 4 ಪಾವು, ಬೆಲ್ಲ 5 ಪಾವು, ಕೆಂಪು ಕಲ್ಲು 6 ಪಾವು, ಗುಗ್ಗುಳ 7 ಪಾವು, ಗುಲಗಂಜಿ 8 ಪಾವು, ಕುರಂಗದ ಕಲ್ಲು 9 ಪಾವು, ಸಜ್ಜರಸ 10 ಪಾವು, ಅರಗು 11 ಪಾವು, ಜೇನು ಮೇಣ 11 ಪಾವು, ಈ ಎಲ್ಲಾ ವಸ್ತುಗಳನ್ನು ಚೂರ್ಣವಾಗಿ ಮಾಡಿಕೊಂಡು ಶೋಧಿಸಿಕೊಳ್ಳಬೇಕು. ಆಮೇಲೆ ಹೊಸ ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ಕಾಯಿಸಬೇಕು. ಸೌಟನ್ನು ಮೇಲೆತ್ತಿ ನೋಡಲು ನೂಲಿನಂತೆ ಪಾಕವು ಬಂದಾಗ ಅಷ್ಠಬಂಧದ ಹದವು ಸರಿಯಾಗುವುದು. ಸ್ವಲ್ಪವೂ ಹದ ಮೀರಬಾರದು. ಹೀಗೆ ಸರಿಯಾಗಿ ತಯಾರಿಸಿದ ಅಷ್ಠಬಂಧದಿಂದ ವಿಗ್ರಹಗಳನ್ನು ಸ್ಥಾಪಿಸಬೇಕು. ನಾಲ್ಕನೇಯದಾಗಿ, ಮಂದಿರದಲ್ಲಿ ಸ್ಥಾಪಿಸುವ ಮೂರ್ತಿಯ ಎತ್ತರ 1 ಅಂಗುಷ್ಟ ಪ್ರಮಾಣದಿಂದ 16 ವಿತಸ್ತಿ(ಬಾಹು) ಪ್ರಮಾಣದವರೆಗೆ ಇರಬಹುದು. ಇದಕ್ಕಿಂತ ಜಾಸ್ತಿ ಇರಬಾರದು. ಮನೆಯಲ್ಲಿ ಪೂಜಿಸುವ ಮೂರ್ತಿಯ ಎತ್ತರ 1 ಅಂಗುಷ್ಟ (ಹೆಬ್ಬೆರಳಿನಷ್ಟು) ಪ್ರಮಾಣವಿರಬೇಕು. ಆದರೆ ಮತ್ಸ್ಯ ಪುರಾಣದಲ್ಲಿ 1 ಅಂಗುಷ್ಟ

ಪ್ರಮಾಣದಿಂದ 12 ಅಂಗುಲ ಪ್ರಮಾಣವನ್ನು ಹೇಳಿವೆ. ಐದನೇಯದಾಗಿ, ಪ್ರಧಾನ ದೇವತೆಯನ್ನು ಸ್ಥಾಪಿಸಿದ ನಂತರ ಆಯಾಯ ದೇವತಾ ವಾಹನವನ್ನು ಉದಾಹರಣೆಗೆ (ನಂದಿ, ಕೂರ್ಮ, ಸಿಂಹ, ಗರುಡ) ಸ್ಥಾಪಿಸಬೇಕು. ಗರ್ಭಗುಡಿಯಲ್ಲಿ ಇರುವ ದೇವರ ಮತ್ತು ದೇವಸ್ಥಾನದ ಹೊರಗಿನ ಗೋಡೆಯ ನಡುವಿನ ಅಳತೆಯನ್ನು ಮಾಡಿ 1, 3, 5, 7, 9, 11, ಈ ಅಳತೆಯನ್ನು ತೆಗೆದುಕೊಂಡು ಧ್ವಜ ಸ್ಥಂಬವನ್ನು ಸ್ತಾಪಿಸಬೇಕು. ಮಂದಿರದ ಗೋಪುರವು ಮತ್ತು ಅದರಲ್ಲಿ ಸ್ಥಾಪಿಸುವ ಕಲಶವು ಭಗವಂತನ ಶಕ್ತಿಯನ್ನು ಆಕರ್ಷಿಸುವ ಮತ್ತು ಶಕ್ತಿಯನ್ನು ಬಿಡುಗಡೆ ಮಾಡುವ "ಎರಿಯಲ್" ಇದ್ದಂತೆ ಕೆಲಸವನ್ನು ಮಾಡುತ್ತದೆ. ಈ ಕಲಶದಲ್ಲಿ ಸಪ್ತ ಋಷಿಗಳು ನೆಲೆಸಿರುತ್ತಾರೆ. ಈ ಕಲಶದ ದರ್ಶಮಾತ್ರದಿಂದ ಅಲ್ಲಿ ಸ್ಥಾಪಿಸಿರುವ ಭಗವಂತನ ದರ್ಶನದ ಪುಣ್ಯ ದೊರೆಯುತ್ತದೆ. ಇದನ್ನು ತಾಮ್ರ, ಹಿತ್ತಾಳೆ, ಇಲ್ಲವೇ ಚಿನ್ನದಿಂದ ಮಾಡಿಸಬಹುದು. ವಿಶೇಷವಾಗಿ ದೇವತಾ ಪ್ರತಿಷ್ಠೆಯನ್ನು 5 ದಿನಗಳು, 3 ದಿನಗಳು, ಕನಿಷ್ಠ 1 ದಿನ ಮಾಡುತ್ತಾರೆ. ನಾವು ಇಲ್ಲಿ ಕೆಳಗೆ 5 ದಿನದ ಪ್ರತಿಷ್ಠೆ ಬಗ್ಗೆ ತಿಳಿಸಿರುತ್ತೇವೆ. 1 ನೇ ದಿನದಂದು ಪುಣ್ಯಾಹ ವಾಚನ, ದೇವ ನಾಂದಿ, ಋತ್ವಿಕ್ ವರ್ಣನೆ, ರಕ್ಷಾ ಬಂಧನ, ಚಕ್ರರಾಜ ಸ್ಥಾಪನೆ (ಯಾಗಶಾಲೆಯ ಪ್ರವೇಶ, ದಿಗ್ಬಂಧನ, ಪಂಚಗವ್ಯ ಹೋಮ, ಮಂಟಪ ದೇವತಾ ಸ್ಥಾಪನೆ, ಅಗ್ನಿ ಪ್ರತಿಷ್ಠೆ), ಸಾಯಂಕಾಲದಲ್ಲಿ ದೀಕ್ಷಾಹೋಮ, ಅಂಕುರಾರ್ಪಣೆ, ಬಲಿಪ್ರದಾನ ಇವು ಮೊದಲನೇಯ ದಿನದ ವಿಧಿ. 2 ನೇ ದಿನದಂದು ನವಗ್ರಹ ಸ್ಥಾಪನೆ, ಮಂಡಲಾದಿ ದರ್ಶನ, ಯೂಪರೋಪಣೆ, ಶಾಂತಿ ಹೋಮ, ಮೂರ್ತಿಗೆ ಜಲಾಧಿವಾಸ, ಇವು 2 ನೇ ದಿನದ ವಿಧಿ. 3 ನೇ ದಿನದಂದು ಜಲಾಧಿವಾಸದಿಂದ ಮೇಲೆತ್ತಿ ಮಹಾ ಸ್ನಾನ_ನೇತ್ರೋನ್ಮೀಲನ, ರಕ್ಷಾಬಂಧನ, ಶಾಂತಿಪಾಠ, ಮಹಾಪೂಜೆ, ಇವು 3 ನೆ ದಿನದ ವಿಧಿ. 4 ನೇ ದಿನದಂದು ಧಾನ್ಯಾದಿವಾಸ, ಶಯ್ಯಾದಿವಾಸ, ತತ್ವಾದಿ ನ್ಯಾಸಗಳು, ರಕ್ಷಾಹೋಮ, ಶಾಂತಿ ಪಾಠ, ಇವು 4 ನೇ ದಿನದ ವಿಧಿ. 5 ನೇ ದಿನದಂದು ಪ್ರತಿಷ್ಠಾಹೋಮ, ಮೂರ್ತಿ ಪ್ರತಿಷ್ಠೆ, ಯಂತ್ರ ಪ್ರತಿಷ್ಠೆ, ಪ್ರಧಾನ ಕಲಶ ಅಭಿಷೇಕ,ಪ್ರಾ ಣಪ್ರತಿಷ್ಠೆ, 16 ಕಲಾ ಆವಾಹನೆ ನೇತ್ರ ಉನ್ಮೀಲನ, ಬಲಿ ಪ್ರದಾನ, ಪೂರ್ಣಾಹುತಿ ಇತ್ಯಾದಿ, ಕಲಶೋದಕ ಮಾರ್ಜನ, ಸುವಾಸಿನಿ ದಂಪತಿ ಪೂಜೆ, ಕಲಶ ವಸ್ತ್ರ, ಪ್ರತಿಮಾದಾನಾದಿಗಳಿಂದ ಬ್ರಾಹ್ಮಣ ಪೂಜೆ, ಆಶೀರ್ವಾದ ಪಡೆಯುವುದು

ಮತ್ತು ಅನ್ನದಾನಾದಿ ಸೇವೆ ಮಾಡುವುದು. ಹೀಗೆ 5 ದಿನಗಳ ವಿಧಿಗಳಿರುತ್ತದೆ. 3 ದಿನದಲ್ಲಿ ಮಾಡುವುದಾದರೆ, ಕೆಲವು ವಿಧಿಗಳನ್ನು ಸೇರಿಸಿ ಮಾಡುತ್ತಾರೆ. ಒಟ್ಟಿನಲ್ಲಿ ಆಗಮ ಪದ್ಧತಿಯಂತೆ ಮೂರ್ತಿ ಪ್ರತಿಷ್ಠೆ ಮಾಡಬೇಕು. ನಮ್ಮ ಐಚ್ಛಿಕ ಭಗವಂತನ ಮೂರ್ತಿಯನ್ನು ಶಾಸ್ತ್ರೋಕ್ತವಾಗಿ ಮಾಡಬಹುದು. ಇಲ್ಲಿ ನವಗ್ರಹ ಮೂರ್ತಿಗಳನ್ನು ಪ್ರತ್ಯೇಕ ಗ್ರಹಗಳಿಗೆ ತಿಳಿಸಿದ ಸ್ಥಳದಲ್ಲಿ, ಅವರವರ ದಿಕ್ಕಿಗೆ ಮುಖ ಮಾಡಿ ಸ್ಥಾಪಿಸಬೇಕು.

----- ****** -----

# 9 ಧಾರ್ಮಿಕ ತಿಳುವಳಿಕೆ

ಪ್ರತಿ ನಿತ್ಯದ ಜೀವನದಲ್ಲಿ ಅನೇಕ ಪ್ರಕಾರದ ಸಂಶಯಗಳು ನಾವು ಮಾಡುತ್ತಿರುವ ಪೂಜೆ-ವ್ರತ-ಹೋಮಗಳಲ್ಲಿ ಕಂಡುಬರುತ್ತದೆ. ಇದನ್ನೆಲ್ಲಾ ತಿಳಿಯಲೇ ಬೇಕಾಗುತ್ತದೆ. ಆದ್ದರಿಂದ ನಾವಿಲ್ಲಿ ಹುಟ್ಟಿನಿಂದ ಸಾಯುವವರೆಗಿನ ಕೆಲವು ಬೇಕಾಗುವ ಮಾರ್ಗದರ್ಶನವನ್ನು **ಜೀವಿತಾವಧಿ**ಯಲ್ಲೂ ಮತ್ತು ಮರಣ ಹೊಂದಿದ ನಂತರ ಬೇಕಾಗುವ ಕೆಲವು ಮಾರ್ಗದರ್ಶನವನ್ನು **ಮರಣೋತ್ತರ**ದಲ್ಲೂ ತಿಳಿಸಿರುತ್ತೇವೆ. ಇದರಿಂದ ಜನರಿಗೆ ಸ್ವಲ್ಪ ಮಟ್ಟಿಗಾದರೂ ಅನುಕೂಲವಾಗಲಿದೆ ಎಂದು ಭಾವಿಸುತ್ತೇವೆ. ಇರಲಿ. ಸಾಮಾನ್ಯ ಜ್ಞಾನಕ್ಕಾಗಿಯಾದರೂ ತಿಳಿಯಲೇ ಬೇಕಾದ ವಿಷಯಗಳಿವು.

## 9.1 ಧಾರ್ಮಿಕ ತಿಳುವಳಿಕೆ - ಜೀವಿತಾವಧಿ

1. **ಪೂಜೆ ಎಂದರೇನು?** “ನಮ್ಮ ಶರೀರವೇ ಒಂದು ಮಂದಿರ. ಆತ್ಮ ಸ್ವಯಂ ಪರಶಿವ. ಪ್ರಕೃತಿ ಸ್ವರೂಪಿಣಿ ಪಾರ್ವತಿಯೇ ಬುದ್ಧಿ. ಪ್ರಾಣವೇ ಸಹಯೋಗಿ. ಸತ್ಕಾರ್ಯೇ ಪೂಜೆ. ನಿದ್ರೆಯೇ ಸಮಾಧಿಸ್ಥಿತಿ. ಸಂಚಾರವೇ ಪ್ರದಕ್ಷಿಣೆ. ಪ್ರತಿಯೊಂದು ಮಾತೂ ಪರಮಾತ್ಮನ ಸ್ತುತಿ. ನಾವು ಮಾಡುವ ಪ್ರತಿಯೊಂದು ಕಾರ್ಯವೂ ಪರಮಾತ್ಮನ ಆರಾಧನೆ” ಎಂದು ಶಂಕರಾಚಾರ್ಯರು ಹೇಳುತ್ತಾರೆ. ಆದ್ದರಿಂದ, ನಮ್ಮನ್ನು ನಾವು ಎಷ್ಟು ಅರ್ಥಪೂರ್ಣವಾಗಿ

ತೊಡಗಿಸಿಕೊಳ್ಳುತ್ತೇವೋ, ಬಾಳುವೆ ನಡೆಸುತ್ತೇವೋ ಅಷ್ಟು ನಮ್ಮ ಪೂಜೆ ಫಲಪ್ರದವಾಗುತ್ತದೆ. ಇದನ್ನು ಅರ್ಥ ಮಾಡಿಕೊಳ್ಳದೆ ಎಷ್ಟು ದೀಪ ಬೆಳಗಿದರೂ, ಅದು ಕೇವಲ ಬತ್ತಿ ಸುಟ್ಟಂತೆ ಆಗುವುದಷ್ಟೆ. ಪೂಜೆ. ಎಲ್ಲಾ ಮಾನವ ಸಂವಹನವನ್ನು ಆಚರಣೆಯ ಮಾಧ್ಯಮದ ಮೂಲಕ ನಡೆಸಲಾಗುತ್ತದೆ. ನಮ್ಮ ದೈನಂದಿನ ಜೀವನ ಕಾರ್ಯಗಳೆಲ್ಲವೂ ಆಚರಣೆಯ ರೂಪಗಳೇ. ಸಾಮಾಜಿಕ ಆಚರಣೆಗಳಿವೆ, ಕಂಪನಿ ಆಚರಣೆಗಳು, ಕೌಟುಂಬಿಕ ಆಚರಣೆಗಳು, ರಾಷ್ಟ್ರೀಯ ಆಚರಣೆಗಳು ಮತ್ತು ಪರಸ್ಪರ ಆಚರಣೆಗಳು. ನಾವು ಧರಿಸುವ ರೀತಿ, ನಾವು ಪರಸ್ಪರ ಸ್ವಾಗತಿಸುವ ರೀತಿ, ಜನ್ಮದಿನಗಳು, ಮದುವೆಗಳು, ಅಂತ್ಯಕ್ರಿಯೆಗಳು, ರಜಾದಿನಗಳಲ್ಲಿ ಸಾಮಾಜಿಕವಾಗಿ ನಿರೀಕ್ಷಿಸಲಾದ ನಮ್ಮ ವರ್ತನೆಗಳು ಮತ್ತು ಸಾಂಪ್ರದಾಯಿಕ ಮೌಲ್ಯಗಳು, ಸಂಪ್ರದಾಯಗಳು ಮತ್ತು ಸಮಾಜದ ರಚನೆಗಳು ಹೀಗೆ ಎಲ್ಲಾ ಔಪಚಾರಿಕ ಸಂದರ್ಭಗಳೆಲ್ಲವೂ ನಿಯಮಾಧೀನವಾಗಿವೆ. ಇದರಲ್ಲಿ ನಾವು ವಾಸಿಸುತ್ತೇವೆ.

2. **ಮನೆಯಲ್ಲಿ ಯಾವ ಯಾವ ದೇವರುಗಳನ್ನು ಇಡಬಹುದು?** ಮುಖ್ಯವಾಗಿ ಆಚಾರ್ಯ ಶಂಕರರು ವಿಧಿಸಿದಂತೆ ಪಂಚಾಯತನ ಕ್ರಮವಿರುತ್ತದೆ. (ಕುಲ ದೇವರನ್ನು ಮೊದಲುಗೊಂಡು) -1) ಸೂರ್ಯ 2) ಗಣಪತಿ 3) ಅಂಬಿಕಾ 4) ಶಿವ 5) ವಿಷ್ಣು ಹೀಗೆ ಐದು ದೇವತೆಗಳನ್ನು ಇಟ್ಟು ಪೂಜಿಸುವುದು. ಕೆಲವೊಮ್ಮೆ ನಮ್ಮ ಕುಲದೇವರು ವೀರಭದ್ರ ಅಥವಾ ವೆಂಕಟರಮಣ ಇಲ್ಲವೇ ರೇಣುಕಾದೇವಿ, ಹೀಗೆ ಬೇರೆ ಬೇರೆ ಇರಬಹುದು, ಆದರೆ ಇವು ಮೂಲ ಶಿವ, ವಿಷ್ಣು, ದೇವಿಯ ಅವತಾರವಿರುವುದರಿಂದ ಮುಖ್ಯ ದೇವತೆ ಪಂಚಾಯತನ ಕ್ರಮದಲ್ಲಿಯೇ ಪೂಜಿಸಿ ಅಥವಾ ಕುಲದೇವರು ಮೊದಲುಗೊಂಡು ಬಾಕಿ ಇನ್ನುಳಿದ ನಾಲ್ಕು ದೇವರನ್ನು ಇಟ್ಟು ಪೂಜಿಸಬಹುದು.

3. **ಪೂಜಿಸುವ ವಿಗ್ರಹಗಳಿಗೆ ಹೀಗೆ ಇರಬೇಕು, ಇಷ್ಟೇ ಇರಬೇಕು ಎಂದೆಲ್ಲ ಇದೆಯೇ?** ಹೌದು. ನಿತ್ಯ ಪೂಜೆಗೆ ಮನೆಯಲ್ಲಿ ಇಡುವ ಮೂರ್ತಿಯು ಯಜಮಾನನ ಹೆಬ್ಬೆರಳಿನಷ್ಟು ಉದ್ದವಿರಬಹುದು, ಮೂರ್ತಿಯು ಘನವಾಗಿರಬೇಕು (ತುಂಬಿರಬೇಕು, ಪೊಳ್ಳು ಇರಬಾರದು) ಅಂಗಾಂಗಗಳು

ಸ್ಪಷ್ಟವಾಗಿರಬೇಕು. ಯಾವುದೇ ಭಾಗವು ತುಂಡಾಗಿರಬಾರದು. ಹಾಗಿದ್ದಲ್ಲಿ ಆ ಮೂರ್ತಿಯು ಪೂಜೆಗೆ ಯೋಗ್ಯವಾಗುತ್ತದೆ. ನಿಂತಿರುವ ಮೂರ್ತಿಗಿಂತ ಕುಳಿತಿರುವ ಮೂರ್ತಿ ಒಳ್ಳೆಯದು.

4. **ದೇವರನ್ನು ಇಡುವ ದಿಶೆ ಯಾವುದಾದರೆ ಒಳ್ಳೆಯದು?** ದೇವರನ್ನು ಈಶಾನ್ಯದಲ್ಲಿ ಇಡುವುದು ಉತ್ತಮ. ಈಶಾನ್ಯದಲ್ಲಿ ಪಶ್ಚಿಮ ಅಭಿಮುಖ ಇಟ್ಟು ನಾವು ಪೂರ್ವಕ್ಕೆ ಮುಖವಾಗಿ ಕುಳಿತು ಪೂಜಿಸಬೇಕು. ಇಲ್ಲವೆ ಉತ್ತರ ಅಭಿಮುಖ ದೇವರನ್ನು ಇಟ್ಟಾಗ ನಾವು ಪಶ್ಚಿಮ ಮುಖವಾಗು ಕುಳಿತು ಪೂಜಿಸಬಹುದು. ಒಟ್ಟಿನಲ್ಲಿ ದೇವರನ್ನು ಪೂರ್ವ, ಉತ್ತರ, ಪಶ್ಚಿಮ ಮುಖವಿಟ್ಟು ಪೂಜಿಸಬೇಕು.

5. **ದೇವರನ್ನು ಇಡುವ ಪೀಠ ಹೇಗಿದ್ದರೆ ಉತ್ತಮ?** ಅವರವರ ಕುಲಾಚಾರದಂತೆ ಪೀಠ ಇಡಬೇಕು. ಪೀಠಗಳಲ್ಲಿ 2 ವಿಧ. 1. ಗುಡಿ ಪೀಠ 2. ತೊಟ್ಟಿಲು ಪೀಠ. ಪೀಠವನ್ನು ನೆಲದ ಮೇಲೆ ಇಡಬೇಕು. ಅಂದರೆ ಮರದ ಅಥವಾ ಕಲ್ಲಿನ ಪೀಠ ಇಡುವ ಸ್ಥಳವನ್ನು ನೆಲದ ನೇರಕ್ಕಿಂತ ಸ್ವಲ್ಪ ಎತ್ತರಗೊಳಿಸಿ ಅದರ ಮೇಲೆ ಪೀಠ ಇಡಬೇಕು. ಪೀಠಕ್ಕೆ ಗೋಪುರವಿರಬೇಕು. ಇದು ಪೃಥ್ವಿಯ ಅಂತರ್ಗತವಾಗ ಭಗವತ್ ಶಕ್ತಿಯನ್ನು ಎಳೆಯುವ (ಎರಿಯಲ್ ನಂತೆ) ಕೆಲಸ ಮಾಡುತ್ತದೆ. ದೇವರನ್ನು ಇಡುವ ಸ್ಥಳ ಪ್ರತ್ಯೇಕವಾಗಿದ್ದರೆ ಉತ್ತಮ.

6. **ದೇವರ ಸ್ಥಾನದಲ್ಲಿ ಇಡುವ ಶಂಖ, ಗಂಟೆ, ದೀಪದ ಮಹತ್ವ ಏನು?** ನಮ್ಮನ್ನು ಅಜ್ಞಾನವೆಂಬ ಅಂಧಕಾರದಿಂದ ಹೊರ ತಂದು ಜ್ಞಾನದ ದಾರಿಯನ್ನು ತೋರಿಸಲು, ಭಗವತ್ ಶಕ್ತಿಯ ಆಕರ್ಷಣೆಗಾಗಿ, ಲಕ್ಷ್ಮೀ ಪ್ರಾಪ್ತಿಗಾಗಿ ನಂದಾ ದೀಪವನ್ನು ಇಡಬೇಕು. ಸಮುದ್ರ ಮಥನಕಾಲದಲ್ಲಿ ಉತ್ಪನ್ನವಾದ ಶಂಖವನ್ನು ಮಹಾವಿಷ್ಣುವು ಕರದಲ್ಲಿ ಧರಿಸಿದನು. ಆಗ ಶಂಖವು ಅತಿ ಪಾವನವಾಯಿತು ಮತ್ತು ದೇವತೆಗಳ ರಾಜನಾದ ಇಂದ್ರನು, ವಾಸುದೇವನ ಆಜ್ಞೆಯಂತೆ ಶಂಖದಲ್ಲಿ ನೆಲೆಸಿದನು. ಆದ್ದರಿಂದ ಈ ಶಂಖವು ದೇವರ ಸಾನಿಧ್ಯಮಯವಾಯಿತು. ಹಾಗಾಗಿ ಶಂಖ ಇರುವುದು ಒಳ್ಳೆಯದು. ಪೂಜೆಗೆ ಆರಂಭದಲ್ಲಿ ಗಂಟೆಯನ್ನು ಭಾರಿಸಿ

ಆರಂಭ ಮಾಡುವುದರಿಂದ ದುಷ್ಟ ಶಕ್ತಿಯ ಉಚ್ಚಾಟನೆಯಾಗಿ ಭಗವಂತನ ಆಗಮನವಾಗಿತ್ತದೆ. ಇದರಿಂದ ಗಂಟೆ ಇಡುವುದು ಉತ್ತಮ.

7. **ಯಾವುದು ತೀರ್ಥ ? ಸೇವನೆ ಕ್ರಮ ಏನು?** ತಾಮ್ರದ ತಟ್ಟೆ(ಲೋಟ) ದಲ್ಲಿ ಶುದ್ಧವಾದ ನೀರನ್ನು ತೆಗೆದುಕೊಂಡು, ತುಳಸಿ ಮತ್ತು ಚಂದನದಿಂದ ಪೂಜಿಸಿದ ಸಾಲಿಗ್ರಾಮವನ್ನು ಅಥವಾ ದೇವರ ಮೂರ್ತಿಯನ್ನು ಪುರುಷಸೂಕ್ತ ಹೇಳುತ್ತಾ ಗಂಟಾ ನಾದವನ್ನು ಮಾಡುತ್ತಾ ಅಭಿಷೇಕವನ್ನು ಮಾಡುವಾಗ ಅಭಿಷೇಕ ಮಾಡಿದ ಜಲವನ್ನು ಹಿಡಿಯುವುದಕ್ಕೆ ತೀರ್ಥ ಎನ್ನುತ್ತೇವೆ. ತೀರ್ಥವನ್ನು 3 ಬಾರಿಗೆ ಕುಡಿಯುಬೇಕು. 1. ಅಕಾಲ ಮೃತ್ಯು ನಿವಾರಣೆಗೆ 2. ಸರ್ವ ವ್ಯಾಧಿ ನಿವಾರಣೆಗೆ 3. ಸಕಲ ದುರಿತ ಉಪಶಮನೆಗೆಂದು ಗೋಕರ್ಣ ಆಕೃತಿ ಹಸ್ತದಿಂದ ಕುಡಿಯಬೇಕು (ಬಲಗೈ ಮಧ್ಯ ಬೆರಳಿನ ಮಧ್ಯ ಗಂಟಿನ ಮೇಲೆ ಹೆಬ್ಬೆರಳಿನ ತುದುಯನ್ನು ಇಟ್ಟಾಗ ಗೋಕರ್ಣ ಆಕೃತಿ ಆಗುತ್ತದೆ)

8. **ಪಂಚಗವ್ಯ ಎಂದರೇನು? ಯಾವಾಗ ಕುಡಿಯಬೇಕು?** ಕಪ್ಪು ಬಣ್ಣದ ಆಕಳಿನ -- ಗೋ ಮೂತ್ರ, ಬಿಳಿ ಬಣ್ಣದ ಆಕಳಿನ -- ಗೋ ಮಯ (ಸಗಣಿ), ಕೆಂಪು ಬಣ್ಣದ ಆಕಳಿನ -- ಗೋವಿನ ಹಾಲು, ಕೆಂಪು ಬಣ್ಣದ ಆಕಳಿನ -- ಹಸುವಿನ ಮೊಸರು, ಕಪಿಲ ಬಣ್ಣದ ಆಕಳಿನ -- ಹಸುವಿನ ತುಪ್ಪ, ಇವುಗಳನ್ನು ಗೋಮೂತ್ರ -- 1 ತೊಲ, ಗೋಮಯ -- ಅರ್ಧ ಹೆಬ್ಬೆರಳಿನಷ್ಟು, ಹಾಲು -- 7 ತೊಲ, ಮೊಸರು -- 3 ತೊಲ, ತುಪ್ಪ -- 1 ತೊಲ, ಕುಶೋದಕ -- 1 ತೊಲ, ಇವುಗಳನ್ನು ಸೇರಿಸಿ ಅಭಿಮಂತ್ರಿಸುವುದಕ್ಕೆ ಪಂಚಗವ್ಯ ಎನ್ನುತ್ತಾರೆ. ದೇಹ ಶುದ್ಧಿ, ಸ್ಥಳ ಶುದ್ಧಿಗಾಗಿ, ಸೂತಕ ನಿವೃತ್ತಿಗಾಗಿ ಪ್ರಾಶನ ಮಾಡಬೇಕು. ಅಲ್ಲದೆ ಎಲ್ಲಾ ವೃತ-ಯಜ್ಞ-ಯಾಗಾದಿ ಆರಂಭದಲ್ಲೂ ಶುದ್ಧಿಗಾಗಿ ಪಂಚಗವ್ಯವನ್ನು ಮಾಡಲಾಗುತ್ತದೆ.

9. **ಪಂಚಾಮೃತ ಅಂದರೇನು? ಯಾವುದನ್ನು ಸೇರಿಸಿದಾಗ ಪಂಚಾಮೃತವಾಗುತ್ತದೆ?** ಐದು ಅಮೃತ ಸದೃಶಗಳಾದ ದ್ರವ್ಯಗಳು ಸೇರಿದಾಗ ಪಂಚ + ಅಮೃತವಾಗುತ್ತದೆ. 1. ಹಾಲು 2. ಮೊಸರು 3. ತುಪ್ಪ 4. ಜೇನು ತುಪ್ಪ 5. ಸಕ್ಕರೆ ಈ ಐದನ್ನು ಬೇರೆ ಬೇರೆಯಾಗಿ ಶುದ್ಧೋದಕದೊಡನೆ ದೇವರಿಗೆ ಅಭಿಷೇಕ

ಮಾಡಿ ತೀರ್ಥವನ್ನು ಪಡೆಯುವುದು ಪಂಚಾಮೃತ. ಇದಕ್ಕೆ ಫಲವನ್ನು ಹಾಕವುದು ಬೇರೆ.

10. **ಅಕ್ಷತ ಎಂದರೇನು?** ತುಂಡಾಗದಿರುವ ಇಡೀ ಅಕ್ಕಿ ಕಾಳುಗಳಿಗೆ ಹಳದಿ ಕುಂಕುಮ ಸ್ವಲ್ಪ ಹಸುವಿನ ತುಪ್ಪ ಸೇರಿಸಿ ಚೆನ್ನಾಗಿ ಕಲಸಿ ಪೂಜೆಗೆ ಬಳಸುವುದನ್ನು ಅಕ್ಷತ ಎನ್ನುತ್ತೇವೆ.

11. **ನೈವೇದ್ಯದ ಬಗೆಗೆ ಅಭಿಪ್ರಾಯ ಏನು?** ಪೀಠದಲ್ಲಿ ದೇವರನ್ನು ಇಟ್ಟು ಪ್ರತಿಷ್ಠಾಪಿಸಿದ ಮೇಲೆ ನಿತ್ಯವೂ ನೈವೇದ್ಯ ಮಾಡಲೇಬೇಕು. ನಾವು ಊಟ ಮಾಡುವ ಮೊದಲು ಊಟಕ್ಕೆ ತಯಾರಿಸಿದ ಎಲ್ಲವನ್ನು ಭಗವಂತನಿಗೆ ಸಮರ್ಪಿಸಿ ಆಮೇಲೆ ನಾವು ಸ್ವೀಕರಿಸಬೇಕು. ಸಮರ್ಪಿಸುವ ನೈವೇದ್ಯ ಕನಿಷ್ಠ ಒಂದು ವ್ಯಕ್ತಿಗೆ ಸಾಕಾಗುವಷ್ಟಾದರೂ ಇರಬೇಕು. ಶಾಖಾಹಾರವಾಗಿರಬೇಕು.

12. **ತುಪ್ಪ ಮತ್ತು ಎಣ್ಣೆಯ ದೀಪಗಳ ಬಗೆಗೆಗಿನ ಮಾಹಿತಿ ಏನು?** ನಾವು ಮನೆಯಲ್ಲಿ ದೇವರಿಗೆ ದೀಪವನ್ನು ಹಚ್ಚುವುದು ಸಹಜ. ವಿಶೇಷವಾಗಿ ತುಪ್ಪದ ದೀಪವನ್ನು ದೇವರ ಬಲಭಾಗದಲ್ಲಿ ಇರಿಸಬೇಕು. ಎಣ್ಣೆಯ ದೀಪವನ್ನು ದೇವರ ಎಡಭಾಗದಲ್ಲಿ ಹಚ್ಚಬೇಕು. ಎಳ್ಳಿನಿಂದ ತಯಾರಿಸಿದ ಎಣ್ಣೆ ಯಾವಾಗಲೂ ಯೋಗ್ಯವಾಗಿರುತ್ತದೆ. ಹಸುವಿನ ತುಪ್ಪವು ಎಲ್ಲಾ ದೇವತಾ ಕಾರ್ಯಗಳಲ್ಲಿ ಉತ್ತಮವಾಗಿರುತ್ತದೆ.

13. **ಮನೆಯಲ್ಲಿ ಹಚ್ಚುವ ದೇವರ ದೀಪವನ್ನು ಎಷ್ಟು ಮುಖ ಹಚ್ಚಬೇಕು?** ಬತ್ತಿ ಎಷ್ಟಿರಬೇಕು? ಮನೆಯಲ್ಲಿ ಹಚ್ಚುವ ದೇವರ ದೀಪಕ್ಕೆ ಒಂದು ಮುಖ. ಮಂದಿರದಲ್ಲಿ ಹಚ್ಚುವ ದೀಪಕ್ಕೆ ಎರಡು ಮುಖಗಳಿರುತ್ತವೆ. ದೀಪದಲ್ಲಿ 5-6 ಹಚ್ಚುವಂತೆ ಇರುತ್ತದೆ. ವಿಶೇಷದಲ್ಲಿ 5 ಮುಖ ಹಚ್ಚಬಹುದು. 2 ಅಥವಾ 3 ಬತ್ತಿಯನ್ನು ಒಂದೊಂದು ಮುಖಕ್ಕೆ ಹಾಕಬೇಕು.

14. **ದೇವರನ್ನು ಪೂಜಿಸುವಾಗ ಯಾವ ಬಗೆಯ ಬಟ್ಟೆಯನ್ನು ಧರಿಸಬೇಕು?** ಕ್ರಮ ಏನು? ಪೂಜೆ ಅಥವಾ ಇನ್ನಿತರ ದೇವತಾ ಕಾರ್ಯಗಳಲ್ಲಿ ತೊಳೆದು ಒಣಗಿಸಿರುವ ಮಡಿ ಅಥವಾ ಧೋತಿಯನ್ನು ಸ್ನಾನವಾದ ಮೇಲೆ ಧರಿಸಿ ಪೂಜೆಗೆ ಕುಳಿತುಕೊಳ್ಳಬೇಕು. ಝರಿ ಅಂಚಿರುವ ಮಡಿ ಅಥವಾ ಧೋತಿಯು ಉತ್ತಮ.

ಧರಿಸಿದ ಮೇಲೆ ಮಲ-ಮೂತ್ರ ವಿಸರ್ಜನೆ ಮಾಡಬಾರದು. ಒದ್ದೆ ಬಟ್ಟೆಯನ್ನು ಧರಿಸಿ ದೇವತಾ ಕಾರ್ಯ ಮಾಡಬಾರದು. ಟವೆಲ್ ಅಥವಾ ಇನ್ನಾವುದೇ ಅಂದರೆ ಪ್ಯಾಂಟು- ಚಡ್ಡಿ ಅಂಗಿ ಧರಿಸಿ ದೇವತಾ ಕಾರ್ಯ ಮಾಡಬಾರದು. (ಹೇಗೆ ವಕೀಲರಿಗೆ ಅವರದ್ದೆ ಆದ ಬಟ್ಟೆಗಳನ್ನು ಧರಿಸಿದರೆ ಶೋಭೆಯೋ ಹಾಗೆ ದೇವತಾ ಕಾರ್ಯಕ್ಕೆ ಶಾಸ್ತ್ರ ಹೇಳಿದಂತೆ ಬಟ್ಟೆ ಧರಿಸಬೇಕು.)

15. **ಮನೆಯಲ್ಲಿ ಮಾಂಸಹಾರ ಸೇವಿಸುವುದರಿಂದ ದೇವರ ಮೂರ್ತಿ ಇಡಬಾರದು ಎನ್ನುತ್ತಾರೆ ಸತ್ಯವೇ?** ಇಂದಿನ ಕಾಲದಲ್ಲಿ ಮಾಂಸಾಹಾರ ಸಹಜವಾಗಿದೆ. ಆದರೆ ಮಾಂಸಾಹಾರ ಸೇವಿಸದೇ ಇರುವುದು ಉತ್ತಮ. ಬಾಕಿ ಅವರವರ ಇಚ್ಛೆಗೆ ಸಂಬಂಧಿಸಿರುತ್ತದೆ. ದೇವರಿಗೆಂದು ಪ್ರತ್ಯೇಕ ಸ್ಥಳವಿದ್ದರೆ ಬೆಳಿಗ್ಗೆ ಸ್ನಾನವಾದ ಬಳಿಕ ಮೊದಲು ಪೂಜೆ ಮಾಡಿ ನಂತರ ಆಹಾರ ಸೇವಿಸಲು ಶಕ್ಯವಿದ್ದರೆ ಮೂರ್ತಿಯನ್ನು ಇಡಲು ಏನೂ ತೊಂದರೆ ಇಲ್ಲಾ. ಇಲ್ಲಿ ಭಕ್ತಿ ಮತ್ತು ಶ್ರದ್ಧೆಯೇ ಮುಖ್ಯ.

16. **ಶನಿ ದೇವರ ಫೋಟೋ, ಮೂರ್ತಿ, ಯಂತ್ರ ಮನೆಯಲ್ಲಿ ಇಡಬಹುದೆ?** ಶನಿ ದೇವರಿಗೆ ಎದುರಿನಿಂದ ಸಾಷ್ಟಾಂಗ ನಮಸ್ಕರಿಸಬಾರದು ಎನ್ನುತ್ತಾರೆ ಯಾಕೆ? ಶನಿ ದೇವರ ಫೋಟೋ, ಮೂರ್ತಿ, ಯಂತ್ರ ಇಡಬಾರದೆಂದು ಯಾವ ಶಾಸ್ತ್ರದಲ್ಲಿಯೂ ಹೇಳಿಲ್ಲ. ಆದರೆ ಎಲ್ಲಾ ಅನಿಷ್ಟಕ್ಕೂ ಶನಿ ಕಾರಣ ಎಂದು ಜನರು ಭಾವಿಸಿರುತ್ತಾರೆ ಇದು ತಪ್ಪು. ನಿಜವಾಗಿಯೂ ತಮ್ಮ ಸ್ಥಿತಿಯನ್ನು ಕಳೆದುಕೊಂಡಿರುವ ನಮ್ಮ ಸಂಸ್ಕೃತಿಯನ್ನು ಶನಿದೇವರ ಪೀಡಾಕಾಲದಲ್ಲಿಯೇ ನೆನಪಿಗೆ ತಂದುಕೊಳ್ಳಬೇಕಾಗುತ್ತದೆ. ಶನಿಯು ಒಲಿದರೆ ಬೇರಾವ ಗ್ರಹವೂ ಕೊಡಲಿಕ್ಕಿಲ್ಲದಷ್ಟು ಸಂಪತ್ತು ಕೀರ್ತಿ ಎಲ್ಲವನ್ನು ಕೊಡುತ್ತಾನೆ. ಹಾಗಾಗಿ ಮನೆಯಲ್ಲಿ ಇಡಬಾರದೆಂದು ತೋರಿದರೆ ದೇವಸ್ಥಾನದಲ್ಲಿಯೆ ಇರಲಿ. ಇಡುವುದಾದರೆ ತಪ್ಪಿಲ್ಲ. ಆರಾಧನೆಯೆ ಮುಖ್ಯ. ಇನ್ನು ಶನಿದೇವರ ಎದುರಿಗೆ ಸಾಷ್ಟಾಂಗ ನಮಸ್ಕಾರ ಬೇಡ ಎನ್ನುವುದು ತಪ್ಪು. ಹಾಗೇನು ಶಾಸ್ತ್ರ ಆಧಾರವಿಲ್ಲ. ಭಕ್ತಿಯಿಂದ ನಮಸ್ಕರಿಸಿದರೆ ಕಷ್ಟ ಪರಿಹಾರವಾಗಿತ್ತದೆ.

17. **ಭಿನ್ನವಾದ ವಿಗ್ರಹ ಯಂತ್ರ ಫೋಟೋಗಳನ್ನು ಏನು ಮಾಡಬೇಕು?** ಪೂಜೆಗೆ ಅನುಕೂಲವಾಗದ ವಿಗ್ರಹ ಯಂತ್ರ ಫೋಟೋವನ್ನು ನದಿಯಲ್ಲಿ ವಿಸರ್ಜನೆ ಮಾಡಬೇಕು. ಇದು ಆಗದೆ ಇರುವ ಪರಿಸ್ಥಿತಿಯಲ್ಲಿ ಒಂದು ಪಾತ್ರೆಯಲ್ಲಿ ನೀರು ಹಾಕಿ ಅದರಲ್ಲಿ ವಿಸರ್ಜನೆ ಮಾಡಿ ಒಂದೆರಡು ತಾಸುಗಳ ನಂತರ ಎಲ್ಲಾದರೂ ಭೂಮಿಯಲ್ಲಿ ಹುಗಿದು ಹಾಕಿರಿ. ಯಾರಿಗೂ ತೊಂದರೆ ಆಗದಂತಿರಲಿ.

18. **ವೃತ ಯಜ್ಞಾದಿಗಳಲ್ಲಿ ಬಳಸುವ ದರ್ಬೆ (ಒಂದು ಪ್ರಭೇದದ ಹುಲ್ಲು) ಮಹತ್ವ ಏನು?** ನಾವು ಯಾವ ವೃತವಾಗಲಿ ಯಜ್ಞ ಯಾಗಾದಿಗಳಾಗಲಿ ಪೂಜಾದಿಗಳಾಗಲಿ ಇದನ್ನು ಆಚರಿಸುವಾಗ ಭಗವಂತನ ಶಕ್ತಿಯ ಜೊತೆಗೆ ದುಷ್ಟ ಶಕ್ತಿಯೂ ಇರುತ್ತವೆ. ಆಗ ನಮ್ಮ ಕೈಯಲ್ಲಿರುವ ದರ್ಭೆಯ ದರ್ಶನ ಮಾತ್ರದಿಂದ ದುಷ್ಟ ಶಕ್ತಿಯು ಅಲ್ಲಿಂದ ಓಡಿ ಹೋಗುತ್ತವೆ. ಇದು ಇಂದ್ರನ ವಜ್ರಾಯುಧವಿದ್ದಂತೆ. ಆದ್ದರಿಂದ ದರ್ಭೆಯನ್ನು ಬಳಸುತ್ತೇವೆ. ಈ ಧರ್ಭೆಯು ದೇವಲೋಕದಿಂದ ಯಜ್ಞ ಯಾಗಾದಿಗಳಿಗೆಂದೆ ಭೂ ಲೋಕಕ್ಕೆ ಭಗವಂತನು ಕಳಿಸಿರುತ್ತಾನೆ.

19. **ಎಲ್ಲಾ ದೇವತಾ ಕಾರ್ಯಗಳಲ್ಲಿ ಬಳಸುವ ದರ್ಭೆಯ ಪವಿತ್ರದ ಮಹತ್ವ ಏನು? ಎಷ್ಟು ದರ್ಭೆಯನ್ನು ಹಾಕುತ್ತಾರೆ? ಏಕೆ ಪವಿತ್ರ ಧರಿಸಬೇಕು?** ಈ ವಿಷಯದಲ್ಲಿ ಒಂದು ಹಿನ್ನಲೆ ಇದೆ. ಬ್ರಹ್ಮ ದೇವನು ಸೃಷ್ಠಿಯನ್ನು ಮಾಡುವವನು, ವಿಷ್ಣುವು ಸ್ಥಿತಿಕರ್ತನು, ಶಿವನು ಲಯಕರ್ತನು. ಒಮ್ಮೆ ಶಿವನಿಗೆ ತಾನೇ ಎಲ್ಲರಿಗೂ ಮೇಲೆಂದು ಅಹಂಕಾರ ಬಂದಿತು. ಆ ಕಡೆ ಸೃಷ್ಠಿಕರ್ತ ಬ್ರಹ್ಮನಿಗೂ ತಾನೇ ಮೇಲೆಂದು ಅಹಂಕಾರ ಬಂದಾಗ ಇಬ್ಬರ ವಾದ-ವಿವಾದದಲ್ಲಿ ಶಿವನು ಬ್ರಹ್ಮನ ನಾಲ್ಕನೇ ತಲೆಯನ್ನು ತನ್ನ ಕೈಯಿಂದ ಕಿತ್ತು ತೆಗೆದಾಗ ಬ್ರಹ್ಮಹತ್ಯಾದೆ ದೋಷ ಬಂದಿತು ಹಾಗೂ ಜಗತ್ತೂ ದೋಷಯುಕ್ತವಾಯಿತು. ಯಜ್ಞ-ಯಾಗಾದಿಗಳನ್ನು ಮಾಡುವುದು ಕಠಿಣವಾಯಿತು. ಆಗ ಎಲ್ಲಾ ದೇವತೆಗಳು ಮತ್ತು ಋಷಿಮುನಿಗಳು ಸೇರಿ ಈ ಎಲ್ಲಾ ದೋಷ ನಿವಾರಣೆಗೆ ದರ್ಭೆಯನ್ನು ಭೂಲೋಕಕ್ಕೆ ತರಬೇಕಾಯಿತು ಮತ್ತು ಶಿವನು ತನ್ನ ಹೆಬ್ಬೆರಳು ಮತ್ತು ಉಂಗುರ ಬೆರಳಿನಿಂದ ಬ್ರಹ್ಮನ ಶಿರವನ್ನು ತೆಗೆದುದರಿಂದ ಶುದ್ಧಿಗಾಗಿ ಪೂಜಾ ಅಧಿಕಾರ ಪ್ರಾಪ್ತಿಗಾಗಿ ದರ್ಭೆಯ ಪವಿತ್ರ ಉಂಗುರ ಧರಿಸಬೇಕೆಂದು

ನಿಯಮಿಸಲಾಯಿತು. ಇದು ದರ್ಭೆಯ ಮಹತ್ವ. ಸಾಮಾನ್ಯ ಎಲ್ಲಾ ಕಾರ್ಯಗಳಲ್ಲಿ 2 ಅಥವಾ 4 ದರ್ಭೆಯಿಂದ ಮಾಡಿದ ಪವಿತ್ರವನ್ನು ಯಾಗಾದಿಗಳಲ್ಲಿ 5 ದರ್ಭೆಯಿಂದ ಮಾಡಿದ ಪವಿತ್ರವನ್ನು ಪಿತೃಕಾರ್ಯಗಳಲ್ಲಿ 3 ದರ್ಭೆಯಿಂದ ಮಾಡಿದ ಪವಿತ್ರವನ್ನು ಧರಿಸಬೇಕು.

20. **ದೇವತಾ ಕಾರ್ಯಗಳಲ್ಲಿ ಯಾವ ಆಸನದ ಮೇಲೆ ಕುಳಿತುಕೊಳ್ಳುವುದು ಉತ್ತಮ?** ದೇವತಾ ಕಾರ್ಯಗಳಲ್ಲಿ ದರ್ಭಾಸನ, ಕಂಬಳಿಯ ಆಸನ, ಮಣೆ ಅಥವಾ ಹುಲ್ಲಿನ ಆಸನದ ಮೇಲೆ ಕುಳಿತುಕೊಳ್ಳುವುದು ಉತ್ತಮ. ಸಾಮೂಹಿಕ ಮತ್ತು 3 ಅಥವಾ 4 ಜನ ಸೇರಿ ಪೂಜಾದಿ ಮಾಡುವ ವೇಳೆಯಲ್ಲಿ ಎಲ್ಲರೂ ಬೇರೆ ಬೇರೆ ಆಸನದಲ್ಲಿ ಕುಳಿತಿರಬೇಕು. ಎಲ್ಲರೂ ಒಂದೇ ಆಸನದ ಮೇಲೆ ಕುಳಿತು ಪೂಜಾ ಕಾರ್ಯವನ್ನು ಮಾಡಬಾರದು.

21. **ಉಪವಾಸದ ಮಹತ್ವ ಏನು?** ಇದರ ಬಗ್ಗೆ ನಿಮ್ಮ ಅನಿಸಿಕೆ ಏನು? ಉಪವಾಸದಲ್ಲಿ ಪಾಕ್ಷಿಕ, ಮಾಸಿಕ ಮತ್ತು ವಾರ್ಷಿಕವಾಗಿ ಕ್ರಮಗಳಲ್ಲಿ ಕಾಣಬಹುದು. ಇನ್ನು ನಿತ್ಯ ವ್ರತಗಳಿಗಾಗಿ, ನೈಮಿತ್ತಿಕ ವ್ರತ ಹಗೂ ಕಾಮ್ಯ ವ್ರತ ಮತ್ತು ಯಜ್ಞ-ಯಾಗಾದಿಗಳಿಗಾಗಿ ಮಾಡುವ ಉಪವಾಸವೆಂದು ವಿಂಗಡಿಸಬಹುದು. ಉಪವಾಸವನ್ನು ಮಾಡುವವರು ಸೂರ್ಯೋದಯದಿಂದ ಮರುದಿನ ಸೂರ್ಯೋದಯದವರೆಗೆ ಕೇವಲ ಜಲಪಾನ ಮಾಡುತ್ತಾ ಭಗವಂತನ ಜಪಾದಿಗಳನ್ನು ಮಾಡಬೇಕು. ಇಂದು ಉಪವಾಸದ ಮಹತ್ವ ತಿಳಿಯುವುದು ಮುಖ್ಯ. ಇಂದಿನ ದಿನಗಳಲ್ಲಿ ಎಲ್ಲರೂ ಉಪವಾಸವನ್ನು ಮಾಡುತ್ತಾರೆ. ಆದರೆ ಕೇವಲ ಆಹಾರ ಸೇವಿಸದೇ ಇದ್ದು ಬೆಳಿಗ್ಗೆ ಕಲಸಕ್ಕೆ ಹೋಗಿ ಸಂಜೆ ಮನೆಗೆ ಬಂದು ರಾತ್ರಿ ಫಲಾಹಾರ ಮಾಡುವುದು ಅಥವಾ ಇನ್ನೇನೋ ತಿನ್ನುವುದು ಉಪವಾಸವೇ? ಇಷ್ಟು ವರ್ಷಗಳಿಂದ ನಾನು ಸೋಮವಾರ ವ್ರತ ಉಪವಾಸ ಮಾಡುತ್ತಿದ್ದೇನೆ ನನಗೆ ಯಾವ ಪ್ರಯೋಜನವೂ ಆಗಿಲ್ಲ. ಆದ್ದರಿಂದ ದೇವರ ಮೇಲೆ ನಂಬಿಕೆ ಹೋಗಿದೆ ಎನ್ನುತ್ತಾರೆ. ಇದು ಯಾವ ನ್ಯಾಯ? ನೀವು ಮಾಡಿದ ಉಪವಾಸ ಕೇವಲ ನಿಮ್ಮ ಆರೋಗ್ಯಕ್ಕೆ ಒಳ್ಳೆಯದೋ ಅಥವಾ ಹಾನಿಯೋ ಅಷ್ಟೆ. ಆರಾಧನೆ ಮಾಡಿಲ್ಲ ಅಂದರೆ ಪ್ರಯೋಜನವಾಗುವುದಿಲ್ಲ. ಹಾಗಾಗಿ

ಯಾವ ಉದ್ದೇಶಕ್ಕಾಗಿ ನಾವು ಉಪವಾಸ ಮಾಡುತ್ತಿದ್ದೇವೆಯೋ ಆ ದೇವರನ್ನು ಉಪವಾಸವಿದ್ದು ಶ್ರದ್ಧಾ-ಭಕ್ತಿಯಿಂದ ಪೂಜಿಸಿ ಜಪಾದಿಗಳನ್ನು ಮಾಡಿದಲ್ಲಿ ಮಾತ್ರ ಉಪವಾಸದ ಫಲ ಸಿಗುವುದು . ಉಪವಾಸವಿದ್ದಾಗ ದೇಹವು ಜಡವಾಗಿರದೇ ಹಗುರವಾಗಿದ್ದು ಸಹಸ್ರಾರ ಚಕ್ರವು ಜಾಗ್ರತವಾಗಲು ಅನುಕೂಲವಾಗಿರುತ್ತದೆ. ಆದ್ದರಿಂದ ಉಪವಾಸ ಮಾಡಿ ಆರಾಧನೆಯನ್ನು ಶ್ರದ್ಧಾ ಭಕ್ತಿಯಿಂದ ಮಾಡಬೇಕು. ಉಪವಾಸದ ಸಂಪೂರ್ಣ ಫಲ ಸಿಗುತ್ತದೆ. ಕೇವಲ ನಿರಾಹಾರವಾಗಿದ್ದರೆ ಯಾವ ಫಲವೂ ಇಲ್ಲ. ಇದು ನಿರರ್ಥಕ.

22. **ಜಪವನ್ನು ಎಷ್ಟು ಮಾಡಬೇಕು? ನಿಯಮ ಏನು?** ನಾವು ಯಾವುದೇ ಜಪವನ್ನು ಲೆಕ್ಕ ಮಾಡಿಯೇ ಮಾಡಬೇಕು. ಇಲ್ಲವಾದರೆ ಅದರಿಂದ ಫಲವಿಲ್ಲ. ಜಪವನ್ನು ಎಷ್ಟು ಮಾಡಬೇಕೆಂದು ಋಷಿಗಳು ಹೀಗೆ ಹೇಳಿದ್ದಾರೆ. ಅಶ್ವಲಾಯನ, ಸಾಂಖ್ಯಾಯನ, ಕೌಷೀತಕೀ ಗೃಹ್ಯ ಸೂತ್ರಗಳಲ್ಲಿ ಸೂರ್ಯೋದಯಕ್ಕೆ 4 ಘಟಿಗಳ ಹಿಂದಿನಿಂದ ಸೂರ್ಯದರ್ಶನ ಪರ್ಯಂತ ಜಪ ಮಾಡಬೇಕು. ಸಾಯಂಕಾಲ ಸೂರ್ಯಾಸ್ತದ ಪರ್ಯಂತ ಜಪಮಾಡಬೇಕೆಂದು ಹೇಳಿದೆ. ಆದರೆ ಜೈಮಿನಿ ಮಹರ್ಷಿಗಳು- 1000, 100 ಇಲ್ಲವೇ 10, ಗೋಭಿಲೀಯ ಗೃಹ್ಯ ಸೂತ್ರದಲ್ಲಿ- 1000, 100, 15, 11 ಅಥವಾ 8. ಅಥರ್ವ ವೇದ ಕೌಶಿಕ ಗೃಹ್ಯಕಾರಿಕೆಯಲ್ಲಿ 1000, 108, 20, 10 ಅಥವಾ 8 ಹೀಗೆ ಸಂಖ್ಯೆಯನ್ನು ಹೇಳಿದೆ. ಹಾಗಾಗಿ 1000, 108, 54, 28, 10 ಮಾಡಬಹುದೆಂಬುದು ಹಿರಿಯರ ಅಭಿಪ್ರಾಯ. ಹೆಚ್ಚಾಗಿ ಎಷ್ಟೂ ಮಾಡಬಹುದು.

23. **ಜಪ ಮಾಡುವ ವಿಧಾನ** : ಬಲಗೈಯನ್ನು ಅಂಗಾತವಾಗಿ ಮಾಡಿ ಎಲ್ಲಾ ನಾಲ್ಕು ಬೆರಳುಗಳನ್ನು ಸ್ವಲ್ಪ ಬಗ್ಗಿಸಿ ಒಂದಕ್ಕೊಂದು ತಾಗುವಂತೆ ಮಾಡಿಕೊಂಡು ಹೆಬ್ಬೆರಳಿನಿಂದ ಬಾಕಿ ಬೆರಳಿನ ಗಂಟನ್ನು ಸ್ಪರ್ಶಿಸಿ ಸಂಖ್ಯೆಯನ್ನು ಎಣಿಸಬೇಕು. ( ಬೆರಳುಗಳು ಮೇಲ್ಮುಖ ಬರುವಂತೆ ಹಿಡಿದರೆ ಗಂಟುಗಳು ಕೆಳಗಿನಂತಿರುತ್ತವೆ). - ಕೊನೆ ಗಂಟು. -ಮಧ್ಯ ಗಂಟು. -ಕೆಳ ಗಂಟು ಹೆಬ್ಬೆರಳಿನಿಂದ ಪವಿತ್ರ(ಉಂಗುರ) ಬೆರಳಿನ ಮಧ್ಯ ಗಂಟು ಸ್ಪರ್ಶವಾದಾಗ 1, ಹೆಬ್ಬೆರಳಿನಿಂದ ಪವಿತ್ರ ಬೆರಳಿನ ಕೆಳಗಂಟು ಮುಟ್ಟಿದಾಗ 2, ಕಿರುಬೆರಳಿನ ಕೆಳಗಂಟು ಮುಟ್ಟಿದಾಗ 3, ಕಿರು

ಬೆರಳಿನ ಮಧ್ಯದ ಗಂಟು ಮುಟ್ಟಿದಾಗ 4, ಕಿರು ಬೆರಳಿನ ಕೊನೆಯ ಗಂಟು ಮುಟ್ಟಿದಾಗ 5, ಉಂಗುರ ಬೆರಳಿನ ಕೊನೆ ಗಂಟು ಮುಟ್ಟಿದಾಗ 6, ಮಧ್ಯಬೆರೆಳಿನ ಕೊನೆ ಗಂಟು ಮುಟ್ಟಿದಾಗ 7, ತೋರು ಬೆರೆಳಿನ ತುದಿಯ ಗಂಟು ಮುಟ್ಟಿದಾಗ 8, ತೋರು ಬೆರಳಿನ ಮಧ್ಯದ ಗಂಟು ಮುಟ್ಟಿದಾಗ 9, ತೋರು ಬೆರಳಿನ ಕೆಳಗಿನ ಗಂಟು ಮುಟ್ಟಿದಾಗ 10. ಹೀಗೆ ಪುನಃ 1 ರಿಂದ 10 ಎಣಿಸುವುದು ಕ್ರಮವಿರುತ್ತದೆ.

24. **ನಾವು ಜನಿವಾರವನ್ನು ಧರಿಸುತ್ತೇವೆ. ಆದರೆ ಯಾವಾಗ ಎಷ್ಟೆಷ್ಟು ಜನಿವಾರ ಧರಿಸುವುದು ಸರಿ?** ಮಾಹಿತಿ ನೀಡಿ. ಜನಿವಾರವು ಶುದ್ಧವಾದ ಹತ್ತಿಯಿಂದ ಕೈಯಲ್ಲಿ ತಯಾರಿಸಬೇಕು. 3 ಎಳೆಯಿರುವ ಜನಿವಾರದಲ್ಲಿ ಒಂದೊಂದು ಎಳೆಗಳಲ್ಲೂ 3-3 ದಾರವಿದ್ದು ಒಟ್ಟು 9 ದಾರಗಳಾಗುತ್ತದೆ. ಈ 9 ದಾರಗಳಲ್ಲೂ ಬೇರೆ ಬೇರೆ ದೇವತೆಗಳನ್ನು ಆಹ್ವಾನ ಮಾಡಿ ಮುಖ್ಯ 3 ಎಳೆಗಳನ್ನು ಒಂದುಗೂಡಿಸಿ ಕಟ್ಟಲಾಗಿತ್ತದೆ. ಇದಕ್ಕೆ ಬ್ರಹ್ಮಗಂಟು ಎಂದು ಹೆಸರು. ಈ ಗಂಟಿನಲ್ಲಿ ಬ್ರಹ್ಮ-ವಿಷ್ಣು- ಮಹೇಶ್ವರರನ್ನು ಕ್ರಮವಾಗಿ ಪೂಜಿಸಿ ಗಾಯತ್ರಿ ಅಭಿಮಂತ್ರಿಸಿದ ಜನಿವಾರವನ್ನು ಬ್ರಹ್ಮಚಾರಿಗಳು ಮದುವೆಗೆ ಮುನ್ನ 1 ಜನಿವಾರವನ್ನು ಧರಿಸಬೇಕು. ಮದುವೆ ಆದ ಮೇಲೆ ಗ್ರಹಸ್ಥಾಶ್ರಮದ ಕೆಲವು ನಿಯಮ ಪಾಲನೆಗಾಗಿ 2 ಜನಿವಾರವನ್ನು ಧರಿಸಬೇಕು. ಇನ್ನು ಕೆಲವರು ಉತ್ತರೀಯದ ಬದಲಿಗೆ 3ನೇ ಜನಿವಾರ ಧರಿಸುತ್ತಾರೆ. ಇದಕ್ಕಿಂತ ಹೆಚ್ಚು ಧರಿಸಬಾರದು.

25. **ನಾವು ಖರೀದಿಸುವ ಮನೆಯ ಎದುರು - ಅಕ್ಕ ಪಕ್ಕ ಮಂದಿರವಿದ್ದರೆ ದೋಷ ಉಂಟಾಗುವುದೇ?** ಶಿವ ಮಂದಿರಕ್ಕೆ ನೂರು ಮಾರು ದೂರದಲ್ಲಿ ದುರ್ಗಾಮಂದಿರ, ಉಗ್ರನೃಸಿಂಹ ಮಂದಿರದ 150 ಮಾರು ದೂರ, ವಿಷ್ಣು ಮಂದಿರದ 20 ಮಾರು ದೂರ, ಆಂಜನೇಯ ಮಂದಿರದ 8 ಮಾರು ದೂರದಲ್ಲಿ ಮನೆ ಇರಬೇಕೆಂದು ಕೆಲವು ಗ್ರಂಥಗಳಲ್ಲಿದೆ. ಆದರೆ ಯಾವುದೇ ಮಂದಿರದ ನೇರ ದೃಷ್ಟಿಗೆ ಮನೆ ಬರದಂತೆ ಇರಲಿ ಎನ್ನುವುದು ಹಿರಿಯರ ಅಭಿಪ್ರಾಯ. ಒಂದು ವೇಳೆ ಮಂದಿರದ ದಕ್ಷಿಣ ಮತ್ತಿ ಪಶ್ಚಿಮದಲ್ಲಿ ಇದ್ದರೂ ತೊಂದರೆ ಇಲ್ಲ. ಪೂರ್ವ ಮತ್ತು ಉತ್ತರ ಭಾಗದಲ್ಲಿ ಗೋಡೆಗೆ ಅಂಟಿದಂತೆ ಇರಬಾರದು.

26. **ಒಂದೇ ದೇವರ 2 ಮೂರ್ತಿಗಳು, ಬಲಸೊಂಡಿಲ ಗಣಪತಿ, ಬಲ ಮುರಿಯ ಶಂಖ ಮನೆಯಲ್ಲಿ ಇರಬಾರದೆ?** ಹೌದು. ಒಂದೇ ದೇವರ 2 ಮೂರ್ತಿಗಳು ಬೇಡ. ಬಲ ಸೊಂಡಿಲ ಗಣಪತಿ ಉಗ್ರ ಎನ್ನುತ್ತಾರೆ. ಆದರೆ ಸರಿಯಾದ ಪೂಜೆ ಪುನಸ್ಕಾರಾದಿಗಳನ್ನು ಮಾಡುವುದಾದಲ್ಲಿ ತೊಂದರೆ ಇಲ್ಲ. ಇದು ಅವರವರ ಕುಲಾಚಾರಕ್ಕೆ ಬಿಟ್ಟಿದ್ದು. ಇನ್ನು ಬಲಮುರಿ ಶಂಖ. ಇಂದು ನಿತ್ಯ ಮನೆಯಲ್ಲಿ ಚಿಕ್ಕ ಎಡಮುರಿ ಶಂಖ ಪೂಜಿಸಿ ನೀರನ್ನು ಪೂಜಾ ದ್ರವ್ಯಕ್ಕೆ ದೇವರ ಮೇಲೆ ಮತ್ತು ಸ್ವಂತ ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳುತ್ತೇವೆ. ಆದರೆ ಬಲಮುರಿ ಶಂಖ. ಇದು ಕೃಷ್ಣನ ಹಸ್ತಾಶ್ರಿತ ಪಾಂಚಜನ್ಯವಾದ್ದರಿಂದ ಸಾದಾ ಶಂಖದಂತೆ ಬಳಸದೇ ಸೀದಾ ದೇವರೆಂದು ಪೂಜಿಸಬೇಕು. ಅದಕ್ಕೆ ಅಭಿಷೇಕ, ಧೂಪ, ದೀಪ, ನೈವೇದ್ಯ ಮಾಡಬೇಕು. ಹಾಗಿದ್ದರೆ ಮಾತ್ರ ಬಲಮುರಿ ಶಂಖವನ್ನು ಇಡಬಹುದು. ಮನೆಯಲ್ಲಿ ಇಡಲೇಬಾರದು ಎಂದು ಎಲ್ಲೂ ಉಲ್ಲೇಖವಿಲ್ಲ.

27. **ನಿತ್ಯ ಸುವಾಸಿನಿಯರು ಪೂಜಿಸುವ ತುಳಸಿ ಗಿಡದ ಬಗೆಗಿನ ಮಾಹಿತಿ ಏನಾದರೂ ಇದ್ದರೆ ತಿಳಿಸಿ.?** ತುಳಸಿಯನ್ನು ಮಂಗಳವಾರ, ಶುಕ್ರವಾರ, ರವಿವಾರ, ಪೂರ್ಣಿಮೆ, ಅಮವಾಸ್ಯೆ, ವೈಧೃತಿ, ವ್ಯತೀಪಾತ, ಸಂಕ್ರಾಂತಿ, ದ್ವಾದಶಿ, ಅಶೌಚ ಇರುವ ವೇಳೆ, ತುಳಸಿಯನ್ನು ಕೊಯ್ದರೆ ಮಹಾವಿಷ್ಣುವಿನ ಶಿರಚ್ಛೇದನ ಮಾಡಿದಷ್ಟು ಪಾಪ ಬರುತ್ತದೆ. ಆದ್ದರಿಂದ ಈ ಮೇಲೆ ತಿಳಿಸಿದ ದಿನಗಳಲ್ಲಿ ತುಳಸಿಯನ್ನು ಕೊಯ್ಯಬೇಡಿರಿ. (ಸ್ಮೃತಿಸಾರ) ಅದೇ ರೀತಿ ರವಿವಾರ ದೂರ್ವೆಯನ್ನು ಕೊಯ್ಯಬಾರದು. ಇದರಿಂದ ಆಯುಷ್ಯ ಕ್ಷೀಣವಾಗುತ್ತದೆ.

28. **ತುಳಸಿ, ದೂರ್ವಾ, ಬಿಲ್ವ ಮತ್ತು ಹೂವು ಎಷ್ಟು ದಿನ ಸಂಗ್ರಹಿಸಬಹುದು?** ನಿರ್ಣಯ ಸಿಂಧುವಿನಲ್ಲಿ ಮತ್ತು ಅನೇಕ ಗ್ರಂಥಗಳಲ್ಲಿ ಬೇರೆ ಬೇರೆ ಪ್ರಕಾರ, ತಿಳಿಸಿದಂತೆ ಬೇರೆ ಬೇರೆಯೇ ಇದೆ. ತುಳಸಿಯನ್ನು ಕೆಲವು ಕಡೆ 30 ದಿನ, 11 ದಿನ, 6 ದಿನ ಮತ್ತು ತುಳಸಿ ಯಾವಾಗಲೂ ದೇವರಿಗೆ ಹಾಕಬಹುದು ಕಲುಶಿತವಾಗುವುದಿಲ್ಲ ಎಂದಿದೆ. ಆದ್ದರಿಂದ ತುಳಸಿಯನ್ನು ಕೊಯ್ದಿಟ್ಟಲ್ಲಿ ಯಾವಾಗಲೂ ಬಳಸಿ. ಬಿಲ್ವ ಪತ್ರೆಯನ್ನು 3 ದಿನಗಳವರೆಗೆ ಇಟ್ಟು

ಬಳಸಬಹುದು. ಕಮಲದ ಹೂವನ್ನು 5 ದಿನ ಇಟ್ಟು ಬಳಸಬಹುದು. ಉಳಿದ ಪುಷ್ಪಗಳನ್ನು 1 ದಿನ ಇಟ್ಟು ಬಳಸಬಹುದು.

29. **ನಿತ್ಯ ಪೂಜಿಸುವ ದೇವರ ಮೂರ್ತಿ ಅಥವಾ ಯಂತ್ರಗಳನ್ನು ಒಮ್ಮೊಮ್ಮೆ ಪೂಜೆ ಮಾಡಲು ಆಗದ ಪರಿಸ್ಥಿತಿ ಬಂದಾಗ ಏನು ಮಾಡಬೇಕು?** ಉದಾ 1. ನಿತ್ಯ ಆರಾಧಿಸುವ ದೇವರ ಪೂಜೆ ಮಾಡಲು ಕೆಲವು ಕಾರಣಗಳಿಂದ ಆಗುವುದಿಲ್ಲ. ಆಗ 1) ಅಶೌಚ ಇದ್ದಲ್ಲಿ 2) ಪ್ರಯಾಣಕ್ಕೆ ಹೋದಲ್ಲಿ 3) ಇನ್ನಾವುದೋ ಕಾರಣ. 1. ದೇವರಿಗೆ ದೀಪ ಹಚ್ಚಿ 2. ಬೇರೆ ಬ್ರಾಹ್ಮಣರಿಂದ ಪೂಜೆ ಮಾಡಿಸಬಹುದು. ಪ್ರಯಾಣದಲ್ಲಿ ಇರುವಾಗ ಪೂಜೆ ಮಾಡಲು ಸರಿ ಆಗುವುದಿಲ್ಲ. ಆಗ ಸಮೀಪದ ದೇವಸ್ಥಾನದಲ್ಲಿ ಪೂಜೆಗೆ ಬ್ರಾಹ್ಮಣರು ಇದ್ದರೆ ಪೂಜೆಗೆ ಕೊಡಬಹುದು. ಯಾವುದೂ ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿ ದೇವರನ್ನು ಒಂದು ಪಾತ್ರೆಯಲ್ಲಿ ಇಟ್ಟು ಧಾನ್ಯವನ್ನು (ಅಕ್ಕಿ, ಗೋಧಿ, ಜೋಳ) ದೇವರು ಮುಳುಗುವಷ್ಟು ಹಾಕಿ ಮೇಲಿಂದ ಹೂವು ಇಟ್ಟು ಪೂಜಿಸಿ ಪ್ರಾರ್ಥನೆ ಮಾಡಿಕೊಳ್ಳಿ. ಪೀಠದಲ್ಲಿ ದೇವರಿಟ್ಟ ಪಾತ್ರೆ ಇಡಿ. ಆಮೇಲೆ ಮುಚ್ಚಳವನ್ನು ಹಾಕಬೇಡಿ. ಧಾನ್ಯಾದಿವಾಸದಲ್ಲಿ ಇರುವಾಗ ಮೂರ್ತಿಗೆ ಸಂಪೂರ್ಣ ಬಲವಿರುತ್ತದೆ. ನೀವು ಪುನಃ ವಾಪಾಸ್ ಮನೆಗೆ ಬಂದಾಗ ಧಾನ್ಯದಿಂದ ತೆಗೆದು ವಿಶೇಷವಾಗಿ ಪೂಜಿಸಿ. ಯಾವ ದೋಷವೂ ಬರುವುದಿಲ್ಲ.

30. **ಗ್ರಹಣ ಕಾಲದಲ್ಲಿ ಏನು ಮಾಡಬೇಕು?** ಗ್ರಹಣ ಸ್ಪರ್ಶವಾದಾಗ ಸ್ನಾನ ಮಾಡಿ, ಪೂಜೆ, ಹೋಮ ಮಾಡಬೇಕು. ಹೊಸ ಜಪವನ್ನು ಉಪದೇಶ ಗುರುಗಳಿಂದ ಪಡೆದು ಗ್ರಹಣ ಆರಂಭದಿಂದ ಮುಗಿಯುವವರೆಗೂ ಜಪಮಾಡಬೇಕು. ಮಂತ್ರಸಿದ್ಧಿಗೆ ಗ್ರಹಣಕಾಲ ಉತ್ತಮವಾಗಿರುತ್ತದೆ. ಗ್ರಹಣ ಮಧ್ಯಕಾಲದಲ್ಲಿ ತರ್ಪಣ ಮಾಡಬೇಕು. ಗ್ರಹಣ ಮೋಕ್ಷವಾದ ಮೇಲೆ ಸ್ನಾನಾದಿಗಳನ್ನು ಮಾಡಿ ಪುನಃ ದೇವರ ಪೂಜೆ ಮಾಡಬೇಕು. ಹಾಲು, ಮೊಸರು, ತುಪ್ಪ ಮುಂತಾದವುಗಳಿಗೆ, ಗ್ರಹಣಕಾಲದಲ್ಲಿ ತುಳಸಿ ಅಥವಾ ದರ್ಭೆಯನ್ನು ಹಾಕಿಡಬೇಕು. ಅದು ಕಲುಶಿತವಾಗುವುದಿಲ್ಲ. 1) ಅಶೌಚ ಇರುವವರೂ ಸಹ ಗ್ರಹಣಕಾಲದಲ್ಲಿ ಸ್ನಾನ ಮಾಡಿ ತರ್ಪಣವನ್ನು ಕೊಡಬಹುದು. 2) ಸೂರ್ಯಗ್ರಹಣ ಸಂಭವಿಸುತ್ತಿದ್ದರೆ 4

ಯಾಮ ಮೊದಲು ಆಹಾರ ಸ್ವೀಕರಿಸುವುದು ನಿಶಿದ್ಧ. 3) ಚಂದ್ರಗ್ರಹಣ ಸಂಭವಿಸುತ್ತಿದ್ದರೆ 3 ಯಾಮ ಮೊದಲು ಆಹಾರ ಸ್ವೀಕರಿಸಬಾರದು (1ಯಾಮ = 3 ಗಂಟೆ). 4) ಗ್ರಸ್ತಾಸ್ತ ಗ್ರಹಣವಾದರೆ ಮಾರನೇ ದಿನ ಶುದ್ಧ ಬಿಂಬ ದರ್ಶನ ಮಾಡಿ ಆಹಾರ ಸ್ವೀಕರಿಸಬೇಕು. 5) ಜನ್ಮ ರಾಶಿ, ಜನ್ಮ ನಕ್ಷತ್ರಗಳಲ್ಲಿ ಗ್ರಹಣ ಸಂಭವಿಸುತ್ತಿದ್ದರೆ ವಸ್ತ್ರ-ಧಾನ್ಯ- ದಕ್ಷಿಣೆಯನ್ನು ಬ್ರಾಹ್ಮಣರಿಗೆ ಕೊಡಬೇಕು. ಗ್ರಹಣ ನಿಮಿತ್ತ ಶಾಂತಿಯನ್ನು ಮಾಡಿಸಿಕೊಳ್ಳಬೇಕು. ಮುಖ್ಯವಾದವು: ಪೂರ್ಣ ಸೂರ್ಯಗ್ರಹಣವಿದ್ದರೆ ಹಿಂದೆ ಮತ್ತು ಮುಂದಿನ 3 ದಿನಗಳು, ಪೂರ್ಣ ಚಂದ್ರಗ್ರಹಣವಿದ್ದರೆ ಹಿಂದೆ ಮತ್ತು ಮುಂದಿನ 3 ದಿನಗಳು, ಖಂಡ ಗ್ರಹಣವಿದ್ದರೆ ಚತುರ್ದಶಿಯಿಂದ ಮೂರು ದಿನಗಳು ಶುಭ ಕಾರ್ಯಗಳಿಗೆ ಪ್ರಶಸ್ತವಾಗಿರುವುದಿಲ್ಲ.

31. **ಮೂಹೂರ್ತಗಳ ಬಗ್ಗೆ ಮಾಹಿತಿ ತಿಳಿಸಿ.** ಒಂದು ದಿನಕ್ಕೆ 24 ಘಂಟೆ = 60 ಘಟಿ. ಹೀಗೆ ಒಂದು ದಿನಕ್ಕೆ 60 ಘಟಿ ತೆಗೆದುಕೊಂಡಾಗ ಬೆಳಗಿನ ಜಾವದಲ್ಲಿ ಅಂದರೆ 52.30 ಘಟಿಯಿಂದ 56.15 ಘಟಿಯವರೆಗೆ ಕಾಲವನ್ನು ಬ್ರಾಹ್ಮೀಮೂಹೂರ್ತ ಎನ್ನುತ್ತಾರೆ. ಸೂರ್ಯನು ಆಕಾಶದ ಮಧ್ಯದಲ್ಲಿ ಇರುವ 1 ಮೂಹೂರ್ತದ ಕಾಲವನ್ನು ಅಭಿಜಿನ್ ಮೂಹೂರ್ತ ಎನ್ನುತ್ತಾರೆ. ಸೂರ್ಯಾಸ್ತ ಸಮಯದ ಹಿಂದೆ ಮತ್ತು ಮುಂದಿನ ಅರ್ಧ ಘಳಿಗೆ 12 ನಿಮಿಷ ಕಾಲವನ್ನು ಗೋಧೂಳಿ ಮೂಹೂರ್ತ ಎನ್ನುತ್ತಾರೆ. ಮುಖ್ಯವಾದುದು: ಗುರು ಅಸ್ತ, ಶುಕ್ರ ಅಸ್ತ, ಅಯನಗಳಲ್ಲಿ, ಸಂಕ್ರಮಣ ಇರುವ ದಿನದಲ್ಲಿ ಶೂನ್ಯ ಮಾಸ ಮತ್ತು ಅಧಿಕ ಮಾಸದಲ್ಲಿ ದುಷ್ಟ ನಕ್ಷತ್ರ ವಾರ, ಕರಣ, ಯೋಗ ಇರುವ ದಿನಗಳಲ್ಲಿ ಶುಭಕಾರ್ಯವನ್ನು ಮಾಡಬಾರದು. ಇಷ್ಟ ಕಾಲೀನ ಲಗ್ನಕ್ಕೆ ಶುಕ್ರ 6ರಲ್ಲಿ, ಮಂಗಳ 8ರಲ್ಲಿ ಇರಬಾರದು. ಪಂಚಾಗ ಶುದ್ಧಿ ಮತ್ತು ಲಗ್ನ ಶುದ್ಧಿ ಇರಬೇಕು.

32. **ಶುಭಕಾರ್ಯದಲ್ಲಿ ಮಾಡುವ ನಾಂದಿ ಬಗ್ಗೆ ನಿಯಮ ತಿಳಿಸಿ.** ಮನೆಯಲ್ಲಿ ಯಾವುದೇ ಶುಭಕಾರ್ಯವನ್ನು ಮಾಡುತ್ತಿದ್ದರೆ ಸ್ವರ್ಗಸ್ಥ ನಮ್ಮ ಪಿತೃಗಳು ಸೂಕ್ಷ್ಮ ರೂಪದಿಂದ ನೋಡುತ್ತಿರುತ್ತಾರೆ. ಅಲ್ಲದೆ ಪಿತೃಗಳ ಆಶೀರ್ವಾದವು ನಮಗೆ ಅತಿ ಮುಖ್ಯವಾದುದು. ಅವರು ನಮ್ಮ ವಂಶಕ್ಕೆ ಶುಭ ಕಾರ್ಯವನ್ನು

ಮಾಡುವಾಗ ಪಿತೃ ದೇವತೆಗಳ ಅನುಗ್ರಹ ಪಡೆಯಲು ಮಾಡುವ ವಿಧಿಗೆ ನಾಂದಿ ಸಮಾರಾಧನೆ(ನಾಂದಿ ಶ್ರಾದ್ಧ) ಎನ್ನುತ್ತಾರೆ. 1) ನಾವು ಯಾವುದೇ ಶುಭಕಾರ್ಯ ಮಾಡುವಾಗ ಕುಲದೇವತಾ ಸ್ಥಾಪನೆ ಮತ್ತು ನಾಂದೀ ಸಮಾರಾಧನೆ ಮಾಡಿ ಕಾರ್ಯ ಆರಂಭಮಾಡುತ್ತೇವೆ. 2) ನಾಂದಿ ಮತ್ತು ಕುಲದೇವತೆ ಸ್ಥಾಪಿಸಿ ಕಂಕಣ ಧರಿಸಿದರೆ ಕಾರ್ಯ ಆರಂಭವಾದಂತೆ. 3) ಒಂದು ವೇಳೆ ಮನೆಯಲ್ಲಿ ಅಶೌಚ ಬರುವ ಸಾಧ್ಯತೆ ಇದ್ದರೆ ಶಾಸ್ತ್ರದಲ್ಲಿ ತಿಳಿಸಿದಂತೆ ಕಾರ್ಯಕ್ಕೆ ಅಡ್ಡಿ ಬರದಂತೆ ಮೊದಲೇ ನಾಂದಿ ಮತ್ತು ಕುಲದೇವತೆ ಸ್ಥಾಪಿಸಿ ಕಂಕಣ ಧಾರಣೆ ಮಾಡಬಹುದು ವಿವಾಹಕ್ಕೆ = 10 ದಿನಗಳ ಮೊದಲು 2. ಉಪನಯನಕ್ಕೆ = 6 ದಿನಗಳ ಮೊದಲು 3. ಚೌಲ ಮತ್ತು ಇತ್ಯಾದಿ ಸಂಸ್ಕಾರಗಳಲ್ಲಿ = 3 ದಿನಗಳ ಮೊದಲು 4. ಯಜ್ಞ-ಯಾಗಾದಿಗಳಲ್ಲಿ = 21 ದಿನಗಳ ಮೊದಲು ಕಂಕಣ ಧರಿಸಿ ಶುಭ ಕಾರ್ಯ ಮಾಡಬಹುದು 5. ಶನಿವಾರ, ಮಂಗಳವಾರ ನಾಂದಿ ಮಾಡಬಾರದು. 6. ನಾಂದಿ ಶ್ರಾದ್ಧ ಮಾಡಿದ ಮೇಲೆ ಅಶೌಚ ಬಂದರೂ ಶುಭ ಕಾರ್ಯ ಮಾಡಲೇ ಬೇಕಾದ ಸಂದರ್ಭವಿದ್ದರೆ ಮಾಡಬಹುದು ಇದು ಆಪತ್ ಧರ್ಮ.

33. **ವೃತ-ಪೂಜೆ- ಹೋಮ- ಹವನ ಬಗೆಗಿನ ನಿಯಮ ತಿಳಿಸಿ.** ವೃತ ಅಥವಾ ಪೂಜೆ, ಯಜ್ಞ ಯಾವುದೇ ದೇವತಾ ಕಾರ್ಯ ಮಾಡುವ ಮೊದಲು ಬೆಳಿಗ್ಗೆ ಬೇಗ ಎದ್ದು ಸ್ನಾನಾದಿಗಳನ್ನು ಮಾಡಿ ಮನೆಯನ್ನು ಗೋಮಯದಿಂದ ಶುದ್ಧಗೊಳಿಸಿ ಆಮೇಲೆ ಮನೆದೇವರ ಪೂಜೆಮಾಡಬೇಕು. ಕೆಲವು ವೃತಗಳನ್ನು ಪ್ರದೋಷಕಾಲ(ಸಾಯಂಕಾಲ) ಮಾಡುವ ಸಂದರ್ಭದಲ್ಲಿ ಉಪವಾಸವಿದ್ದು ವೃತಾದಿಗಳು ಮುಗಿದ ಮೇಲೆ ಭೋಜನ ಮಾಡಬೇಕು. ಬೆಳಿಗ್ಗೆ ಪೂಜಾದಿಗಳು ನಡೆಸಿದಲ್ಲಿ ಪ್ರಸಾದ ಸ್ವೀಕರಣೆ, ಮರುದಿನ ಸೂರ್ಯೋದಯ ಪರ್ಯಂತ ಜಾಗರಣೆ ಮಾಡಿ ಅಂದರೆ ರಾತ್ರಿ ಪೂರ್ತಿ ಭಗವಂತನ ಜಪ-ನಾನಾವಿಧವಾದ ಕಥೆ ಪುರಾಣ ಕೀರ್ತನೆ ಕೇಳುತ್ತಾ ಮರುದಿನ ಸೂರ್ಯೋದಯದ ನಂತರ ಪುನಃ ಪೂಜೆ ಮಾಡಿ ಪ್ರಸಾದ ಸ್ವೀಕರಿಸಬೇಕು ಎಂದು ಪುರಾಣ ಹೇಳುತ್ತದೆ. ಆದರೆ ಇಂದಿನ ಕಾಲದಲ್ಲಿ ಅದು ಕಷ್ಟ. ಆದ್ದರಿಂದ ನಮಗೆ ಆದಷ್ಟು ಹೆಚ್ಚು ನಿಯಮ ಪಾಲಿಸಬೇಕು. ಯಜ್ಞ ಯಾಗಾದಿಗಳನ್ನು ಮಾಡುವ ಸಂದರ್ಭದಲ್ಲಿ ಮಾಂಸಾಹಾರ

ಸ್ವೀಕರಿಸುವವರು 8 ದಿನಗಳು ಇಲ್ಲವೇ 3 ದಿನಗಳಾದರೂ ಬಿಟ್ಟಿರಬೇಕು. ಆದಷ್ಟು ಶುಚಿಯಾಗಿರಬೇಕು. ನಾವು ಏನೇ ಪೂಜೆ ಹೋಮ ಮಾಡಿದರೂ ಶ್ರದ್ಧಾ-ಭಕ್ತಿಯಿಂದ ಮಾಡಿದರೆ ಮಾತ್ರ ಫಲ ಸಿಗುತ್ತದೆ.

34. **ನಾವು ಬೇರೆ ಜಾತಿಯವರು ಈ ಪೂಜೆಯ ಅಥವಾ ಹೋಮ ಮಾಡಬಹುದೇ?** ನನ್ನ ಅನಿಸಿಕೆಯಂತೆ ಶುಚಿರ್ಭೂತನಾಗಿ ಶ್ರದ್ಧಾ- ಭಕ್ತಿಯಿಂದ ಸಂಪೂರ್ಣ ವಿಶ್ವಾಸದಿಂದ ಎಲ್ಲಾ ಪೂಜೆ ಹೋಮಾದಿಗಳನ್ನು ಮಾಡಬಹುದು. ಭಗವಂತನು ಎಲ್ಲರಿಗೂ ಒಬ್ಬನೇ. ಇಲ್ಲಿ ಜಾತೀಯತೆ ಬೇಡ. ಆದರೆ ಶಾಸ್ತ್ರ ಮತ್ತು ಪುರಾಣಗಳು ಶೃತಿ- ಸ್ಮೃತಿಗಳು ನಿಯಮವನ್ನು ವಿಧಿಸಿದೆ.

35. **ಎಲ್ಲರೂ ಎಲ್ಲಾ ಮಂತ್ರವನ್ನು ಜಪಿಸಬಹುದಾ? ನಿಯಮ ಏನು?** ಈಗ ನಾವು ಮಾರ್ಕೆಟಿನಲ್ಲಿ ಎಲ್ಲಾ ಮಂತ್ರಗಳ ಸಿ.ಡಿ ಅಥವಾ ಇನ್ನಾವುದೇ ಕೇಳಿ ಕೇಳಿ ಅದೇ ಮಕ್ಕಳಿಗೂ ಹೇಳಿಕೊಡುವುದನ್ನು ಕಾಣುತ್ತೇವೆ. ಆದರೆ ಸಿ.ಡಿ ಯಲ್ಲಿ ಮಂತ್ರವನ್ನು ಸಂಗೀತಕ್ಕೆ ಅಳವಡಿಸಿ ಅವರಿಗೆ ಬೇಕಾದಂತೆ ಹೇಳುತ್ತಾರೆ. ಆದರೆ ಮಂತ್ರವು ಅದರದ್ದೆ ಆದ ಸ್ವರದಲ್ಲಿ ಹೇಳಿದರೆ ಮಾತ್ರ ಫಲಕಾರಿಯಾಗುತ್ತದೆ. ವೇದ ಮಂತ್ರ ಮತ್ತು ಬೀಜಾಕ್ಷರ ಮಂತ್ರವನ್ನು ಗುರು ಉಪದೇಶದ ಹೊರತಾಗಿ ಮಾಡಲೇಬಾರದು. ಇದಕ್ಕೆ ಸರಿ ಸಮವಾದ ಶ್ಲೋಕ ಅಥವಾ ಪೌರಾಣಿಕ ಮಂತ್ರಗಳಿವೆ ಅದನ್ನು ಹೇಳಬೇಕು. ಸಿ.ಡಿಯನ್ನು ಕೇಳಿ ಅಥವಾ ಇನ್ನಾರೋ ಹೇಳಿದ್ದು ಕೇಳಿ ಮಕ್ಕಳಿಗೆ ಮಂತ್ರಗಳನ್ನು ಹೇಳಿಕೊಡಬಾರದು. ಸ್ವರಗಳು ತಪ್ಪುತ್ತದೆ. ಅದರಿಂದ ಯಾವ ಪ್ರಯೋಜನವಾಗುವುದಿಲ್ಲ. ಇದರಿಂದ ನಾವು ಪಡೆಯುವುದಕ್ಕಿಂತ ಕಳೆದುಕೊಳ್ಳುವುದೇ ಹೆಚ್ಚು. ಆದ್ದರಿಂದ ಗುರು ಉಪದೇಶದ ಹೊರತಾಗಿ ಮಂತ್ರ ಮತ್ತು ಬೀಜಾಕ್ಷರ ಮಾಡಬಾರದು.

36. **ಯಾವ ದೇವರಿಗೆ ಯಾವ ಪುಷ್ಪ ಪೂಜೆ ಒಳ್ಳೆಯದು ?** ಗಣಪತಿಗೆ - ಕೆಂಪು ಹೂ , ದೂರ್ವೆ ಶಿವನಿಗೆ - ಬಿಳಿ ಹೂ, ಬಿಲ್ವ ಪತ್ರೆ, ತುಂಬೆ ಹೂ ವಿಷ್ಣುವಿಗೆ - ಬಿಳಿ ಹೂ, ತುಳಸಿ, ಮಲ್ಲಿಗೆ ಇತ್ಯಾದಿ ದುರ್ಗೆಗೆ - ಕೆಂಪು ಮತ್ತು ಎಲ್ಲಾತರಹದ್ದು ರವಿ - ಕೆಂಪು ತಾವರೆ ಮತ್ತು ಇತರ ಕೆಂಪು ಹೂಗಳು ಚಂದ್ರ - ಬಿಳಿ ತಾವರೆ ಮತ್ತು ಇತರೆ ಬಿಳಿ ಹೂಗಳು ಮಂಗಳ - ಕೆಂಪು ಕರವೀರ, ಕೆಂಪು ಕಣಗಿಲು ಇತ್ಯಾದಿ ಬುಧ -

ಸುವಾಸಿತ ಜಾಜಿ ಹೂವು ಗುರು - ಹಳದಿ ಸೇವಂತಿಗೆ ಮತ್ತು ಹಳದಿ ಹೂವು ಶುಕ್ರ - ಬಿಳಿ ತಾವರೆ, ಬಿಳಿ ಕಮಲ ಇತ್ಯಾದಿ ಶನಿ - ನೀಲಿ ಶಂಖ ಪುಷ್ಪ ಮತ್ತು ಇತರೆ ರಾಹು - ಮಂದಾರ ಇತ್ಯಾದಿ ಹೂವ ಕೇತು - ಕೆಂಪು ಕಣಗಿಲು ಮತ್ತು ಇತ್ಯಾದಿ ಆದರೆ ಸುವಾಸಿತವಾದ ಎಲ್ಲಾ ರೀತಿಯ ಹೂವುಗಳು ಎಲ್ಲಾ ದೇವರಿಗೂ ಶ್ರೇಷ್ಠ. ಆದರೆ ಲಕ್ಷ್ಮೀಗೆ ದೂರ್ವಾ ಮತ್ತು ತುಂಬೆಯ ಹೂವು, ಗಣಪತಿಗೆ ಚತುರ್ಥಿ ಬಿಟ್ಟು ಉಳಿದ ದಿನಗಳಲ್ಲಿ ತುಳಸಿ ಬೇಡ. ಶಿವನಿಗೆ ವಿಶೇಷ ದಿನ ಬಿಟ್ಟು ಉಳಿದ ದಿನ ತುಳಸಿ ಮತ್ತು ಕೇದಿಗೆ ಹೂವು ಬೇಡ.

37. **ನವಗ್ರಹ ಧಾನ್ಯ, ವಸ್ತ್ರ ಮತ್ತು ಜಪ ಸಂಖ್ಯೆ ತಿಳಿಸಿ.** ಗ್ರಹ ಧಾನ್ಯ ವಸ್ತ್ರ ಜಪ ಸಂಖ್ಯೆ **ರವಿ** - ಗೋಧಿ ಕೆಂಪು ವಸ್ತ್ರ 7 ಸಾವಿರ, **ಚಂದ್ರ** - ಭತ್ತ ಬಿಳಿ ವಸ್ತ್ರ 11 ಸಾವಿರ, **ಮಂಗಳ** - ತೊಗರಿ ಕೆಂಪು ವಸ್ತ್ರ 10 ಸಾವಿರ, **ಬುಧ** - ಹೆಸರು ಕಾಳು ಹಸಿರು ವಸ್ತ್ರ 4 ಸಾವಿರ, **ಗುರು** - ಕಡಲೆ ಹಳದಿ ವಸ್ತ್ರ 19 ಸಾವಿರ, **ಶುಕ್ರ** - ಅವರೆ ಬಿಳಿ ವಸ್ತ್ರ 16 ಸಾವಿರ, **ಶನಿ** - ಕಪ್ಪು ಎಳ್ಳು ಕಪ್ಪು ವಸ್ತ್ರ 23 ಸಾವಿರ, **ರಾಹು** - ಉದ್ದಿನ ಕಾಳು ನೀಲಿ ವಸ್ತ್ರ 18 ಸಾವಿರ, **ಕೇತು** - ಹುರುಳಿ ಕಾಳು ಚಿತ್ರವಿರುವ ವಸ್ತ್ರ 17 ಸಾವಿರ

38. **ನವಗ್ರಹ ಮಂಡಲದಲ್ಲಿ ಗ್ರಹಗಳ ಸ್ಥಾನ ಮತ್ತು ಮುಖದ ದಿಶೆ ತಿಳಿಸಿ** (ಋಕ್ ಮತ್ತು ಯಜುರ್ವೇದ ರೀತಿ) ರವಿ - ವರ್ತುಲಾಕಾರ ಮಂಡಲ ಮಧ್ಯದಲ್ಲಿ ಪೂರ್ವಾಭಿಮುಖ, ಚಂದ್ರ - ಸಮಚತುರಸ್ರ ಆಗ್ನೇಯದಲ್ಲಿ ಪಶ್ಚಿಮಾಭಿಮುಖ, ಮಂಗಳ -ತ್ರಿಕೋಣಮಂಡಲ ದಕ್ಷಿಣದಲ್ಲಿ ದಕ್ಷಿಣಾಭಿಮುಖ, ಬುಧ - ಬಾಣಾಕಾರ ಮಂಡಲ ಈಶಾನ್ಯದಲ್ಲಿ ಉತ್ತರಾಭಿಮುಖ, ಗುರು - ದೀರ್ಘಚತುರಸ್ರ ಮಂಡಲ ಉತ್ತರದಲ್ಲಿ ಉತ್ತರಾಭಿಮುಖ, ಶುಕ್ರ - ಪಂಚಕೋಣಾಕಾರ ಮಂಡಲ ಪೂರ್ವದಲ್ಲಿ ಪೂರ್ವಾಭಿಮುಖ, ಶನಿ - ಧನುರಾಕಾರ ಮಂಡಲ ಪಶ್ಚಿಮದಲ್ಲಿ ಪಶ್ಚಿಮಾಭಿಮುಖ, ರಾಹು - ಶೂರ್ಪಾಕಾರ ಮಂಡಲ ನೈರುತ್ಯದಲ್ಲಿ ದಕ್ಷಿಣಾಭಿಮುಖ, ಕೇತು - ಧ್ವಜಾಕಾರ ಮಂಡಲ ವಾಯುವ್ಯದಲ್ಲಿ ದಕ್ಷಿಣಾಭಿಮುಖ.

39. **ಋತುಮತಿ (ಋತುಕಾಲ) (ಪೀರಿಯಡ್) ಈ ಬಗೆಗೆ ಇರುವ ನಿಯಮಗಳನ್ನು ತಿಳಿಸಿ? ಪೂಜೆ ಪುನಸ್ಕಾರಕ್ಕೆ ಎಷ್ಟನೇ ದಿನ ಶುದ್ಧಿ ಆಗುವುದು?** ಸ್ತ್ರೀಯರು ಪ್ರತಿ ತಿಂಗಳು ಋತುಕಾಲದಲ್ಲಿ 3 ರಾತ್ರಿಗಳು ಕಳೆದ ಮೇಲೆ ಸ್ನಾನಾದಿಗಳಿಂದ ಶುದ್ಧರಾಗುತ್ತಾರೆ. 5ನೇ ದಿನ ಎಲ್ಲಾ ಪೂಜೆ ಪುನಸ್ಕಾರಗಳಿಗೆ ಕುಳಿತುಕೊಳ್ಳಬಹುದು. ಆದರೆ ಇಲ್ಲಿ ಕೆಲವೊಂದು ಸಮಸ್ಯೆಗಳು ಬರುತ್ತಿದ್ದಲ್ಲಿ ಅಂದರೆ 1) ಋತುಕಾಲ ಮುಗಿದು ಪುನಃ 17 ದಿನಗಳ ಒಳಗೆ ರಜೋದರ್ಶನ ಆದಲ್ಲಿ ಸ್ನಾನ ಮಾಡಿದರೆ ಸಾಕು. . 2) 18ನೇ ದಿನ ರಜೋದರ್ಶನವಾದಲ್ಲಿ 1 ರಾತ್ರಿ ನಂತರ ಶುದ್ಧಿಯಾಗುವರು. 3) 19ನೇ ದಿನ ರಜೋದರ್ಶನವಾದಲ್ಲಿ 2 ರಾತ್ರಿ ನಂತರ ಶುದ್ಧಿಯಾಗುತ್ತಾರೆ. 4) ನಂತರ ರಜೋದರ್ಶನವಾದಲ್ಲಿ 3 ರಾತ್ರಿಗಳ ನಂತರ ಶುದ್ಧಿಯಾಗುತ್ತಾರೆ. ಸಾಮಾನ್ಯವಾಗಿ ತಿಂಗಳಿಗೊಮ್ಮೆ ರಜೋದರ್ಶನವಾಗುತ್ತದೆ. ಆದರೆ ಕೆಲವೊಮ್ಮೆ ಶರೀರದಲ್ಲಿನ ಪರಿವರ್ತನೆಯಿಂದ ತೊಂದರೆ ಆದಲ್ಲಿ ಮೇಲಿನ ನಿಯಮ ಪಾಲಿಸಿರಿ.

40. ತಂದೆ- ತಾಯಿಗಳು ಇರುವಾಗ ಉತ್ತರೀಯಾರ್ಥವಾಗಿ 3ನೇ ಜನಿವಾರ ಧರಿಸಬಾರದು.

41. ಮಾನವನು ಜನಿಸುವಾಗ 3 ಋಣಗಳನ್ನು ತೀರಿಸಬೇಕಾಗುತ್ತದೆ. ಅ) ದೇವ ಋಣ ಆ) ಋಷಿ ಋಣ ಇ) ಪಿತೃ ಋಣ. ದೇವತಾ ಆರಾಧನೆ ಹೋಮಾದಿಗಳಿಂದ ದೇವ ಋಣ ತೀರಿಸಬೇಕು. ವೇದ-ಶಾಸ್ತ್ರ-ಪುರಾಣಗಳ ಅಧ್ಯಯನದಿಂದ ಋಷಿ ಋಣ ತೀರುವುದು. ತಂದೆ ತಾಯಿಗಳ ಸೇವೆ ಮಾಡುವುದರಿಂದ ಮತ್ತು ಪಿತೃ ಕಾರ್ಯವನ್ನು ಮರೆಯದೇ ಮಾಡುವುದರಿಂದ ಪಿತೃ ಋಣ ತೀರುವುದು.

42. ಜ್ಯೇಷ್ಠ ಪುತ್ರನಿಗೆ ಜ್ಯೇಷ್ಠ ಪುತ್ರಿಗೆ ಜ್ಯೇಷ್ಠ ಮಾಸದಲ್ಲಿ ವಿವಾಹ ಮಾಡಬಾರದು.

43. ಒಂದು ವೇಳೆ ಮೊದಲನೇ ಹೆಂಡತಿ ಮೃತಳಾದರೆ 2ನೇ ವಿವಾಹವಾಗುವುದಾದರೆ ಹೆಂಡತಿ ಮೃತ ದಿನದಿಂದ ಬೆಸ ವರ್ಷದಲ್ಲಿ ವಿವಾಹವಾಗಬೇಕು. 3ನೇ ವಿವಾಹ ಕಲಿಯುಗದಲ್ಲಿ ನಿಶಿದ್ಧವಾಗಿದೆ. ಆದ್ದರಿಂದ 3ನೇ ವಿವಾಹ ಆಗುವ ಸಮಯ

ಬಂದಲ್ಲಿ 3ನೇ ವಿವಾಹ ಅರ್ಕದ ಜೊತೆಗೆ ಮಾಡಿಕೊಂಡು ಮತ್ತೆ ವಿವಾಹ ಆಗಬಹುದು.

44. ಯಮಳರಿಗೆ(ಅವಳಿ-ಜವಳಿ) ಒಂದೇ ಮಂಟಪದಲ್ಲಿ ಉಪನಯನ ಅಥವಾ ವಿವಾಹ ಸಂಸ್ಕಾರವನ್ನು ಮಾಡಬಹುದು.
45. ದಕ್ಷಿಣಾಯನದಲ್ಲಿ ಉಪನಯನ ಮಾಡಬಾರದು.
46. ಉಪನಯನ ಸಂಸ್ಕಾರದಲ್ಲಿ ಕೇಶ ಮುಂಡನವಿರುತ್ತದೆ. ಆ ವೇಳೆಯಲ್ಲಿ ವಟುವಿಗೆ ಗೋವಿನ ಪಾದದಷ್ಟು ದೊಡ್ಡ ಶಿಖೆಯನ್ನು ಬಿಡಬೇಕು ಅಥವಾ ಶಿಖೆಯಲ್ಲಿ 3200ಕ್ಕೂ ಹೆಚ್ಚು ಕೂದಲುಗಳು ಇರಬೇಕು.
47. ಉಪನಯನ ಕಾಲದಲ್ಲಿ ವಟುವಿಗೆ ಗಾಯತ್ರೀ ಉಪದೇಶ ಮಾಡುವ ವಟುವಿನ ತಂದೆಗೆ ಉಪದೇಶ ಅಧಿಕಾರ ಪ್ರಾಪ್ತಿಗಾಗಿ 12,000ಕ್ಕೂ ಹೆಚ್ಚು ಗಾಯತ್ರೀ ಜಪ ಮಾಡಿಸಬೇಕು.
48. ವೇದಕ್ಕೆ ಅಧಿಪತಿಗಳು ಋಗ್ವೇದಕ್ಕೆ ಅಧಿಪತಿ- ಗುರು ಯಜುರ್ವೇದಕ್ಕೆ ಅಧಿಪತಿ - ಶುಕ್ರ ಸಾಮವೇದಕ್ಕೆ ಅಧಿಪತಿ- ಕುಜ ಅಥರ್ವವೇದಕ್ಕೆ ಅಧಿಪತಿ - ಬುಧ, ಶನಿ ವೇದಾಧಿಪತಿಗಳು ಅಸ್ತರಿರುವಾಗ ಉಪನಯನ ಮಾಡಬಾರದು.
49. ತಾಯಿಯ ಗರ್ಭಿಣಿ ಇರುವಾಗ 5 ತಿಂಗಳ ಒಳಗಿದ್ದರೆ ಉಪನಯನ ಮಾಡಬಹುದು. ಆದರೆ ಗ್ರಹ ಪ್ರವೇಶ ಬಲಿ ಪ್ರಧಾನ ಮುಂತಾದವು ಬೇಡ.
50. ಒಂದೇ ವರ್ಷದಲ್ಲಿ 2 ಬಾರಿ ನಾಂದಿ ಸಮಾರಾಧನೆ ಮಾಡಬಾರದು. ಒಂದು ವೇಳೆ ಮಾಡಲೇಬೇಕಾದ ಪರಿಸ್ಥಿತಿಯಲ್ಲಿ ಮಾವಂದೀರುಗಳಿಂದ ಮಾಡಿಸಿ, ಸಂವತ್ಸರವಾದರೂ ಬದಲಿಯಾಗಿರಲಿ ಇಲ್ಲವೇ ನದಿ ಮತ್ತು ಪರ್ವತಗಳಿಂದ ಭೇಧಿಸಿದ ದೇಶಾಂತರವಾಗಿರಲಿ.
51. 1 ವರ್ಷಕ್ಕೆ 1 ಸಂವತ್ಸರವಾಗುತ್ತದೆ. ಇದರಲ್ಲಿ 5 ವಿಧಗಳು. ಅ) **ಸೌರಮಾನ**: ಸೂರ್ಯನು ಮೇಷ ರಾಶಿಯಿಂದ ಮೀನ ರಾಶಿಯವರೆಗಿನ ಚಕ್ರವನ್ನು ಸುತ್ತಿಬರಲು ಬೇಕಾಗುವ ಅವಧಿಗೆ ಸೌರವರ್ಷ ಎನ್ನುತ್ತಾರೆ. ಇದಕ್ಕೆ 365 ದಿನ 15 ಘಟಿ 31 ವಿಘಟಿ. ಆ) **ಚಾಂದ್ರಮಾನ**- ಒಂದು ಚಾಂದ್ರಮಾನ ವರ್ಷಕ್ಕೆ 354 ಅಥವಾ 355 ದಿನಗಳು. ಇದು ಚೈತ್ರಾದಿ ಆರಂಭವಾಗುತ್ತದೆ. ವಿ. ಸೂ:

ಸೌರಮಾನದಲ್ಲಿ 365 ದಿನಗಳು ವರ್ಷಕ್ಕೆ, ಚಾಂದ್ರಮಾನದಲ್ಲಿ 355 ದಿನಗಳು ವರ್ಷಕ್ಕೆ. 1 ವರ್ಷಕ್ಕೆ ಬರುವ 10 ಅಥವಾ 11 ದಿನಗಳನ್ನು ಸರಿ ದೂಗಿಸುವ ಸಲುವಾಗಿ 3 ವರ್ಷಗಳಿಗೊಮ್ಮೆ 1 ಅಧಿಕವರ್ಷ ಬರುತ್ತದೆ. ಇ) **ಸಾವನಮಾನ**(ವರ್ಷ)- ಸಾವನ ಮಾನದಲ್ಲಿ 1 ವರ್ಷಕ್ಕೆ 360 ದಿನಗಳು. ಈ) **ನಾಕ್ಷತ್ರ ಮಾನ**(ವರ್ಷ) - ನಾಕ್ಷತ್ರಮಾನದಲ್ಲಿ ಒಂದು ವರ್ಷಕ್ಕೆ 324 ದಿನಗಳು (ಚಂದ್ರನಿಗೆ ಒಂದು ನಕ್ಷತ್ರದಿಂದ ಮತ್ತೊಂದು ನಕ್ಷತ್ರಕ್ಕೆ ಹೋಗಲು ಬೇಕಾಗುವ ಅವಧಿಗೆ ನಾಕ್ಷತ್ರದಿನವೆಂತಲೂ, 27 ದಿನಗಳಿಗೆ ನಾಕ್ಷತ್ರಮಾಸವೆಂತಲೂ, 12 ನಾಕ್ಷತ್ರ ಮಾಸಗಳಿಗೆ ಒಂದು ನಾಕ್ಷತ್ರ ವರ್ಷ. ಉ) **ಬಾರ್ಹಸ್ಪತ್ಯಮಾನ**: ಗುರುವಿಗೆ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋಗಲು ಬೇಕಾಗುವ ಅವಧಿ.

52. ಪಂಚಾಂಗವೆಂದರೆ ವಾರ, ತಿಥಿ, ನಕ್ಷತ್ರ, ಯೋಗ, ಕರಣ ಎಂಬ 5 ಅಂಗಗಳು ಸೇರಿದವು ಎಂದರ್ಥ.

53. ಸಂವತ್ಸರಗಳು – 60, ಅಯನಗಳು – 2, ಋತುಗಳು- 6, ಚಾಂದ್ರಮಾಸ – 12, ಸೌರಮಾನ – 12, ತಿಥಿಗಳು – 30, ನಕ್ಷತ್ರಗಳು – 27, ಯೋಗಗಳು – 27, ಕರಣಗಳು – 11, ಪಕ್ಷಗಳು - 2.

54. ಜ್ಯೋತಿಷ್ಯ ಶಾಸ್ತ್ರವು ಅ) ಸಿದ್ಧಾಂತ ಆ) ಸಂಹಿತೆ ಇ) ಹೋರಾ ಎಂಬ ತ್ರಿಸ್ಕಂಧ ರೂಪದಿಂದ ಆಗಿದೆ. ಅ) ಸಿದ್ಧಾಂತವು ಗ್ರಹಗಳು ಚಲಿಸುವ ಕಕ್ಷೆ ಮಾರ್ಗದ ಗಣಿತ ಕ್ರಮವನ್ನು ತಿಳಿಸುತ್ತದೆ. ಆ) ಸಂಹಿತೆಯಲ್ಲಿ ಗ್ರಹಣಗಳು ಮತ್ತು ಗ್ರಹಗಳ ಉದಯಾಸ್ತದಿಂದ ಉಂಟಾಗುವ ಫಲವನ್ನು ತಿಳಿಸುತ್ತದೆ. ಇ) ಹೋರಾಸ್ಕಂಧದಿಂದ ಮಗು ಜನಿಸಿದಾಗ ಇರುವ ಅಂದರೆ ಜನನಕಾಲದಲ್ಲಿ ಇರತಕ್ಕ ಗ್ರಹ, ನಕ್ಷತ್ರ, ಲಗ್ನಾದಿಗಳಿಂದ ಬರುವ ಫಲವನ್ನು ತಿಳಿಸುತ್ತದೆ.

55. ವೇದಗಳು ಜ್ಞಾನದ ಸಾಗರಗಳು. ಅವುಗಳಲ್ಲಿ ತಿಳಿಸಿರುವ ವಿಷಯಗಳು ಮಾನವನ ಅಭ್ಯುದಯದ ಆಧಾರ ಸ್ತಂಭಗಳು. ಹೀಗಿರುವ ನಮ್ಮ ವೇದಗಳು 4. ಅ)ಋಗ್ವೇದ ಆ) ಯಜುರ್ವೇದ ಇ) ಸಾಮವೇದ ಈ) ಅಥರ್ವವೇದ.

56. ಋಗ್ವೇದಕ್ಕೆ- 21 ಶಾಖೆಗಳು, ಯಜುರ್ವೇದಕ್ಕೆ - 109 ಶಾಖೆಗಳು, ಸಾಮವೇದಕ್ಕೆ - 1000 ಶಾಖೆಗಳು, ಅಥರ್ವವೇದಕ್ಕೆ - 50 ಶಾಖೆಗಳು ಹೀಗೆ

ನಾಲ್ಕು ವೇದಗಳು ಸೇರಿ 1180 ಶಾಖೆಗಳು ಇರುತ್ತದೆ. ಇದಲ್ಲದೇ ಜ್ಞಾನಕ್ಕಾಗಿ ನಮ್ಮ ಋಷಿ ಮಹನೀಯರುಗಳು ಪುರಾಣಗಳನ್ನು ಮತ್ತು ಶಾಸ್ತ್ರಗಳನ್ನು ತಿಳಿಸಿರುತ್ತಾರೆ.

57. ವೇದವ್ಯಾಸರು ರಚಿಸಿದ ನಾಲ್ಕು ವೇದಗಳು ಒಂದೇ ಮಹಾಮೇರುವಿನಂತೆ ಇತ್ತು. ಇದನ್ನು ಪುನಃ ಕೃಷ್ಣದ್ವೈಪಾಯನ ಮಹರ್ಷಿಗಳು ವರ್ಗಶಃ ಎತ್ತಿ ಪೃಥಕ್ಕರಿಸಿ, ವಿಭಾಗಗೊಳಿಸಿ ಒಂದೇ ಇರುವ ಮಹಾರಾಶಿಯನ್ನು ನಾಲ್ಕು ವೇದಗಳಾಗಿ ವಿಭಾಗಗೊಳಿಸಿದರು ಅಲ್ಲದೇ ಅಂದಿನಿಂದ ವೇದವ್ಯಾಸರೆಂದು ಪ್ರಶಿದ್ಧರಾದರು.

58. ಕೃಷ್ಣದ್ವೈಪಾಯನ ಮೊದಲಿಗೆ, ಪೈಲನೆಂಬ ಶಿಷ್ಯನಿಗೆ ಋಗ್ವೇದವನ್ನು, ವೈಶಂಪಾಯನರಿಗೆ ಯಜುರ್ವೇದವನ್ನು, ಜೈಮಿನಿಗೆ ಸಾಮವೇದವನ್ನು, ಸುಮಂತುವಿಗೆ ಅಥರ್ವವೇದವನ್ನು ಉಪದೇಶ ಮಾಡಿದರು. ಇದು ವೇದ ಪ್ರಚಾರದ ಆರಂಭದ ಇತಿಹಾಸವಾಗಿದೆ. ಹೀಗೆ ಅನೇಕ ವಿಧವಾದ ತಿಳುವಳಿಕೆ ಜನಸಾಮಾನ್ಯರಿಗೆ ತಿಳಿಸಬೇಕೆಂದು ಚಿಕ್ಕ ಪ್ರಯತ್ನವನ್ನು ಮಾಡಿರುತ್ತೇವೆ. ಇದರ ಸದುಪಯೋಗವನ್ನು ಪಡೆಯಬೇಕು. ಮಹಾಮೇರು ಪರ್ವತದಂತಿರುವ ನಮ್ಮ ಸಂಸ್ಕೃತಿಯಲ್ಲಿನ ಎಲ್ಲಾ ಸಮಸ್ಯೆಗೆ ಉತ್ತರಿಸುವುದು ಅಸಾಧ್ಯ. ಗುರುಹಿರಿಯರಿಂದ ತಿಳಿದ ಕೆಲವನ್ನು ಮಾತ್ರ ಬರೆದಿರುತ್ತೇವೆ. ಇನ್ನೂ ಈ ಭಾಗದಲ್ಲಿ ತಿಳುವಳಿಕೆ ಬೇಕಾದಲ್ಲಿ ಸಂಪರ್ಕಿಸಬಹುದು.

59. ಕಣ್ಣಿನ ಭಾಗಗಳು ಹಾರುತ್ತಿದ್ದರೆ ಫಲಗಳು ಪುರುಷರಿಗೆ ಪರಿಣಾಮ ಮಹಿಳೆಯರಿಗೆ ಪರಿಣಾಮ ಬಲಗಣ್ಣಿನ ಬಲಬದಿಗೆ ಯಶಸ್ಸು ಬಲಗಣ್ಣಿನ ಮೇಲಿನ ರೆಪ್ಪೆಯ ಬಲಭಾಗ ನಾಶ ಬಲಗಣ್ಣಿನ ಎಡಬದಿಗೆ ನಾಶ ಬಲಗಣ್ಣಿನ ಮೇಲಿನ ರೆಪ್ಪೆಯ ಎಡಭಾಗ ಕಷ್ಟ ಕಣ್ಣಿನ ರೆಪ್ಪೆಯ ಕೆಳಬದಿಗೆ ನಾಶ ಕಣ್ಣು ರೆಪ್ಪೆಗಳು ಭಯ ಕೆಳಗಣ್ಣಿನ ಬಲಬದಿಗೆ ಭಯ ಬಲಗಣ್ಣಿನ ಕೆಳಗಿನ ರೆಪ್ಪೆಯ ಬಲಭಾಗ ಸುಖ ಕೆಳಗಣ್ಣಿನ ಎಡಬದಿಗೆ ಹರಣ ಬಲಗಣ್ಣಿನ ಕೆಳಗಿನ ರೆಪ್ಪೆಯ ಎಡಭಾಗ ಸುಖ ಎಡಗಣ್ಣಿನ ಬಲಬದಿಗೆ ಪ್ರಸಿದ್ಧ ಕೆಳಗಣ್ಣಿನ ಕೆಳಭಾಗ ಭಯ ಎಡಗಣ್ಣಿನ ಎಡಬದಿಗೆ ನಾಶ ಎಡಗಣ್ಣಿನ ಮೇಲಿನ ರೆಪ್ಪೆಯ ಬಲಭಾಗ ಸುಖ ಹುಬ್ಬುಗಳು ಲಾಭ ಎಡಗಣ್ಣಿನ ಮೇಲಿನ ರೆಪ್ಪೆಯ ಎಡಭಾಗ ಸುಖ ಕೆಳಗಣ್ಣಿನ

ಬಲ ರೆಪ್ಪೆಗಳು ಸುಖ ಹುಬ್ಬುಗಳು ಭಯ ಕೆಳಗಣ್ಣಿನ ಎಡ ರೆಪ್ಪೆಗಳು ಯಶಸ್ಸು ಎಡಗಣ್ಣಿನ ಕೆಳಗಿನ ರೆಪ್ಪೆಯ ಬಲಭಾಗ ಲಾಭ ಕೆಳರೆಪ್ಪೆಗಳು ನಾಶ ಕಣ್ಣಿನ ರೆಪ್ಪೆಯ ಕೆಳಗಿನ ಮಧ್ಯ ಭಾಗ ಭಯ

60. ಹಲ್ಲಿ ಬಿದ್ದ ಫಲಗಳು ಸ್ಥಾನ ಪುರುಷರಿಗೆ ಸ್ತ್ರೀಯರಿಗೆ ತಲೆ ಜುಟ್ಟು ಸುಖ ಪ್ರಾಪ್ತಿ ಲಕ್ಷ್ಮೀ ಪ್ರಾಪ್ತಿ ಕೂದಲಿನ ಗಂಟು ರೋಗ ರೋಗ ನಡು ತಲೆಯಲ್ಲಿ ಮರಣ ಮರಣ ಹಣೆಯಲ್ಲಿ ಧನಲಾಭ ದ್ರವ್ಯನಾಶ ಹುಬ್ಬುಗಳಲ್ಲಿ ದ್ರವ್ಯನಾಶ ದ್ರವ್ಯನಾಶ ಬಲಗಣ್ಣಿಗೆ ಶುಭ ದುಃಖ ಎಡಗಣ್ಣಿಗೆ ಬಂಧನ ಪತಿ ದರ್ಶನ ಮುಖದಲ್ಲಿ ಮೃಷ್ಟಾನ್ನ ಮೃಷ್ಟಾನ್ನ ಮೂಗಿನಲ್ಲಿ ಸೌಭಾಗ್ಯ ಸೌಭಾಗ್ಯ ಬಲಭುಜಕ್ಕೆ ಜಯ ಸುಖ ಎಡಭುಜಕ್ಕೆ ಪರಾಜಯ ಸುಖ ಬಲಕೈಯಲ್ಲಿ ದ್ರವ್ಯನಾಶ ದ್ರವ್ಯನಾಶ ಎಡಕೈಯಲ್ಲಿ ಕಲಹ ಲಾಭ ಬಲಮುಂಗೈಗೆ ದ್ರವ್ಯನಾಶ ಭೂಷಣ ಎಡಮುಂಗೈಗೆ ಭೂಲಾಭ ಭೂಲಾಭ ಕೈ ಬೆರಳಿಗೆ ಇಷ್ಟಾರ್ಥ ಸಿದ್ಧಿ ಅಲಂಕಾರ ಕೈ ಉಗುರಿಗೆ ದ್ರವ್ಯನಾಶ ದ್ರವ್ಯನಾಶ ಅಂಗೈಯಲ್ಲಿ ಸುಖ ಸುಖ ಬೆನ್ನಿನಲ್ಲಿ ಮಿತ್ರಲಾಭ ಪುತ್ರಲಾಭ ಮೂಗಿನ ತುದಿ ವ್ಯಸನ ವ್ಯಸನ ಬಲಕಿವಿಯಲ್ಲಿ ಲಾಭ ಆಯುರ್ವೃದ್ಧಿ ಎಡಕಿವಿಯಲ್ಲಿ ದುಃಖ ಸುವರ್ಣಲಾಭ ಬಲಕೆನ್ನೆಯಲ್ಲಿ ಇಷ್ಟಪ್ರಾಪ್ತಿ ಪತಿಗೆ ಕಷ್ಟ ಕೆಳ ತುಟಿಯಲ್ಲಿ ಸಂಪತ್ತು ಸಂಪತ್ತು ಮೇಲ್ತುಟಿಯಲ್ಲಿ ಕಲಹ ಕಲಹ ತುಟಿಯ ಕೆಳಗೆ ರಾಜದ್ವೇಷ ಕಲಹ ಕೊರಳಿನಲ್ಲಿ ಮಿತ್ರಾಗಮನ ಭೂಲಾಭ ಕೊರಳ ಹಿಂದೆ ಶತ್ರು ಭಯ ನಿತ್ಯ ಕಲಹ ಕಾಲುಗಳಲ್ಲಿ ಬಂಧನ ಪ್ರಯಾಣ ಪಾರ್ಶ್ವಗಳಲ್ಲಿ ಬಂಧು ದರ್ಶನ ಬಂಧು ದರ್ಶನ ಹೊಟ್ಟೆಯಲ್ಲಿ ದ್ರವ್ಯನಾಶ ಶುಭ ಮೊಲೆಯಲ್ಲಿ ಸೌಭಾಗ್ಯ ಬಹುದುಃಖ ಎಡತೋಳಿಗೆ ಬಹು ಕ್ಲೇಶ ಆಭರಣ ಲಾಭ ಸೊಂಟದಲ್ಲಿ ವಸ್ತ್ರಲಾಭ ವಸ್ತ್ರಲಾಭ ಹೊಕ್ಕಳಿನಲ್ಲಿ ಜಯ ಕೀರ್ತಿ ಬುದ್ಧಿ ವೃದ್ಧಿ ತೊಡೆಯಲ್ಲಿ ವಸ್ತ್ರಲಾಭ ಸಂತಾನ ಲಾಭ ಮೊಣಕಾಲಿಗೆ ಬಂಧನ ಬಂಧನ ಜಂಘೆಯಲ್ಲಿ ಪ್ರವಾಸ ದ್ರವ್ಯನಾಶ ಕಾಲುಬೆರಳಿಗೆ ಪುತ್ರನಾಶ ಧನಲಾಭ “

## 9.2 ಧಾರ್ಮಿಕ ತಿಳುವಳಿಕೆ – ಮರಣೋತ್ತರ

ಮಾನವನು ಜನಿಸುವಾಗ ಮೂರು ಋಣ (ಸಾಲ) ವನ್ನು ಹೊಂದಿರುತ್ತಾನೆ. ಅವು ದೇವ ಋಣ, ಋಷಿ ಋಣ, ಪಿತೃ ಋಣ ಎಂಬುದಾಗಿರುತ್ತದೆ. ಈ ಭಾಗದಲ್ಲಿ ಪಿತೃ ಋಣ ತೀರಿಸುವ ಬಗ್ಗೆ ವಿಚಾರಮಾಡಬೇಕಾಗಿದೆ. ಪಿತೃಗಳೆಂದರೆ ನಮ್ಮ ತಾಯಿ, ತಂದೆ, ಅಜ್ಜ, ಅಜ್ಜಿ ಹೀಗೆ ತಂದೆಯಿಂದ 3 ಪೀಡಿಗಳು, ತಾಯಿಯಿಂದ 3 ಪೀಡಿಗಳು, ತಾಯಿಯ ತಂದೆಯಿಂದ 3 ಪೀಡಿಗಳು, ತಾಯಿಯ ತಾಯಿಯಿಂದ 3 ಪೀಡಿಗಳು, ಒಟ್ಟು 12 ಪ್ರಮುಖವಾಗಿರುತ್ತದೆ. ಆಮೇಲೆ ದೊಡ್ಡಪ್ಪ- ಚಿಕ್ಕಪ್ಪ- ದೊಡ್ಡಮ್ಮ- ಚಿಕ್ಕಮ್ಮ- ಅಣ್ಣ- ತಮ್ಮರು- ಅಕ್ಕ-ತಂಗಿ-ಮಾವ-ಅತ್ತೆ ಇತ್ಯಾದಿ 2 ಮತ್ತು 3 ನೇ ಹಂತದಲ್ಲಿ ತೆಗೆದುಕೊಳ್ಳುತ್ತೇವೆ. ನಾವು ನಮ್ಮ ತಂದೆ-ತಾಯಿಗಳನ್ನು ಬದುಕಿರುವವರೆಗೆ ಪ್ರೀತಿಯಿಂದ ನೋಡಿಕೊಳ್ಳಬೇಕು. ಅವರು ನಮ್ಮನ್ನು ಸಾಕಿ-ಸಲಹಿ ನಮ್ಮ ಏಳಿಗೆಗಾಗಿ ಪಟ್ಟ ಶ್ರಮವನ್ನು ಎಂದೂ ಮರೆಯಬಾರದು. ಮಕ್ಕಳಾದ ನಾವು ಅವರಿಗೆ ಕಷ್ಟ ಕೊಟ್ಟರೆ, ಅವರ ಶಾಪ ಮತ್ತು ಕಣ್ಣೀರು ಮಕ್ಕಳ ಜೀವನದಲ್ಲಿ ಪ್ರವಾಹದಷ್ಟು ಕಠಿಣವಾದೀತು. ಅಲ್ಲದೆ ಸರ್ವ ನಾಶ ಹೊಂದುವುದು ಖಚಿತ. ಪಿತೃಗಳ ಆಶೀರ್ವಾದ ನಮ್ಮ ಜೊತೆ ಇದ್ದರೆ ದೇವರ ಆಶೀರ್ವಾದ ಇದ್ದಂತೆ ನಮ್ಮ ಗೆಲುವು ನಿಶ್ಚಿತ. ಹಾಗಾಗಿ ಪಿತೃಗಳು ಬದುಕಿ ಇರುವ ವರೆಗೆ ಸಂತೋಷದಿಂದ ನೋಡಿಕೊಂಡು ಆಮೇಲೆ ಅವರಿಗೆ ಸದ್ಗತಿ ಅಥವಾ ಮೋಕ್ಷ ಮಾರ್ಗ ಹೊಂದಲು ಬೇಕಾದ ಕ್ರಿಯಾ-ಕರ್ಮ-ದಾನ-ಧರ್ಮ ಮೊದಲಾದವುಗಳನ್ನು ಮಾಡಬೇಕು. ಪಿತೃಗಳಿಗೆ ಮರಣಾನಂತರ ಶಕ್ತಿ ಯನ್ನು ನೀಡುವ ಶ್ರಾದ್ಧವನ್ನು ತಪ್ಪದೇ ಮಾಡಲೇಬೇಕು. ಇದು ಮಕ್ಕಳು ಪಿತೃಗಳಿಗೆ ನೀಡಿದ (ತೀರಿಸಿದ) ಪಿತೃ ಋಣ. ನಮ್ಮ ಶೃತಿ-ಸ್ಮೃತಿ-ಪುರಾಣಗಳು ಇದನ್ನೇ ಪುನಃ ಪುನಃ ಹೇಳುತ್ತಿವೆ. ಮಾತೃದೇವೋಭವ ಪಿತೃದೇವೋಭವ ಎಂಬ ಉಕ್ತಿಯಂತೆ ದೇವ ಸ್ಥಾನದಲ್ಲಿ ಪೂಜಿಸಬೇಕು. ಈ ಭಾಗದಲ್ಲಿ ಮರಣಾನಂತರದಲ್ಲಿ ಬರುವ ಕೆಲವು ಸಮಸ್ಯೆಗಳ ಬಗ್ಗೆ ವಿವರವನ್ನು ನೀಡಿರುತ್ತೇವೆ.

1. **ಪರಿವಾರದಲ್ಲಿ ಒಬ್ಬ ವ್ಯಕ್ತಿ ಮರಣ ಹೊಂದಿದ ಕೂಡಲೇ ಮೊದಲು ಏನು ಮಾಡಬೇಕು?** ಪರಿವಾರದಲ್ಲಿ ಯಾವುದೇ ವ್ಯಕ್ತಿ ಗತಿಸಿದ ಕೂಡಲೇ ಮನೆಯ

ಒಳಗಿನ ರೂಮಿನಿಂದ ಅಂದರೆ ಪ್ರಧಾನ ಬಾಗಿಲಿನ ಹೊರಗೆ ಚಾಪೆಯನ್ನು ಹಾಸಿ ಅದರ ಮೇಲೆ ದರ್ಭೆಯನ್ನು ಹಾಕಿ ಅದರ ಮೇಲೆ ದಕ್ಷಿಣಕ್ಕೆ ತಲೆ ಇರುವಂತೆ ಕೈ ಕಾಲು ಮಡಚಿ ಮಲಗಿಸಬೇಕು. ತೆಂಗಿನ ಕಾಯನ್ನು ಸಮನಾದ 2 ಭಾಗ ಬರುವಂತೆ ಒಡೆದು, ಅದರಲ್ಲಿ ಎಣ್ಣೆಯನ್ನು ಹಾಕಿ ದೀಪ ಹಚ್ಚಿ, ತಲೆಯ ಹತ್ತಿರ ಇಡಬೇಕು. ಮಲಗಿಸಿದ ಮೇಲೆ ಮನೆಯವರು ಗಂಗೋದಕವನ್ನು ಬಾಯಲ್ಲಿ ಹಾಕಬಹುದು. ಇನ್ನು ಕೆಲ ಸಂಪ್ರದಾಯದಲ್ಲಿ ಭಸ್ಮ ಅಥವಾ ಗೋಪೀ ಚಂದನವನ್ನು ಮೈಗೆಲ್ಲಾ ಹಚ್ಚುತ್ತಾರೆ. ರುದ್ರಾಕ್ಷಿ ಅಥವಾ ತುಲಸಿಮಣಿಗಳ ಮಾಲೆಯನ್ನು ಹಾಕುತ್ತಾರೆ. ಹೀಗೆ ಕೆಲವೊಂದು ಅವರವರ ಕುಲಪದ್ಧತಿಯಂತೆ ಮಾಡಬಹುದು.

2. **ಮೃತರ ಸಂಸ್ಕಾರವನ್ನು ಯಾರು ಮಾಡಬೇಕು?** ಸಾಮಾನ್ಯವಾಗಿ ತಾಯಿ-ತಂದೆ ಮೃತರಾದಲ್ಲಿ ಹಿರಿಯ ಮಗನು ಕಾರ್ಯವನ್ನು ಮಾಡಬೇಕು. ಇಲ್ಲದಿದ್ದರೆ ಕಿರಿಯ ಮಗ ಅಥವಾ ಮಧ್ಯದವನು ಮಾಡಬೇಕು. ಗಂಡು ಮಕ್ಕಳು ಇಲ್ಲದಿದ್ದರೆ ಹೆಣ್ಣು ಮಕ್ಕಳ ಪತಿಯು ಮಾಡಬೇಕು. ಮಕ್ಕಳೇ ಇಲ್ಲದಿದ್ದರೆ ದೊಡ್ಡಪ್ಪ ಅಥವಾ ಚಿಕ್ಕಪ್ಪ ಇಲ್ಲವೇ ಅವರ ಮಕ್ಕಳು ಇಲ್ಲವಾದರೆ ಖಾಸ ಅಣ್ಣ-ತಮ್ಮರು ಇಲ್ಲದಿದ್ದರೆ ಸೋದರ ಮಾವ, ಸೋದರ ಮಾವಂದಿರ ಮಕ್ಕಳು ಇಲ್ಲವೇ ಅಳಿಯಂದಿರು, ಸಮೀಪದ ಬಂಧುಗಳು ಯಾರೂ ಇಲ್ಲದಿದ್ದರೆ ಮಿತ್ರರು ಸಂಸ್ಕಾರವನ್ನು ಮಾಡಬೇಕು. ಒಂದು ವೇಳೆ ತಂದೆ ಜೀವಂತ ಇದ್ದು ಮಗ ಸತ್ತರೆ ಮಗನ ಸಂಸ್ಕಾರವನ್ನು ತಂದೆಯು ಮಾಡಬೇಕು. ಆಗದಿದ್ದಲ್ಲಿ ಚಿಕ್ಕಪ್ಪ-ದೊಡ್ಡಪ್ಪ ಇವರಿಂದ ಇಲ್ಲವೇ ಸ್ವಗೋತ್ರರಿಂದಲೇ ಮಾಡಿಸಬೇಕು.

3. **ವ್ಯಕ್ತಿ ಗತಿಸಿದ ದಿನ ಹೇಗಿದೆ? ದೋಷ ಇದೆಯೆ ಎಂದು ಹೇಗೆ ತಿಳಿಯಬಹುದು? ಬರುವ ದೋಷಗಳಾವುದು?** ವ್ಯಕ್ತಿ ಗತಿಸಿದಾಗ ಮುಖ್ಯವಾಗಿ ದೋಷ ಇದೆಯೇ ಎಂಬುದನ್ನು ತಿಳಿದುಕೊಳ್ಳಬೇಕು. ಇದರಲ್ಲಿ ಬರುವ ಪ್ರಮುಖ ದೋಷಗಳೆಂದರೆ ಅ) ಧನಿಷ್ಠಾ ಪಂಚಕ - ಧನಿಷ್ಠ, ಶತಭಿಷ, ಪೂರ್ವಾಭಾದ್ರಪದಾ, ಉತ್ತರಾಭಾದ್ರಪದಾ, ರೇವತಿ ಈ ನಕ್ಷತ್ರದಲ್ಲಿ ಮೃತರಾದರೆ ವಂಶಾರಿಷ್ಟವು, ಅತಿ ಕೆಡುಕು ಆಗುತ್ತದೆ. ಇದು ಧನಿಷ್ಠಾ ಪಂಚಕ

ದೋಷ. ಆ) ತ್ರಿಪಾದ ದೋಷಗಳು- ನಕ್ಷತ್ರ - ಕೃತ್ತಿಕಾ, ಪುನರ್ವಸು, ಉತ್ತರಾ, ವಿಶಾಖಾ, ಉತ್ತರಾಷಾಢ, ಪೂರ್ವಾಭಾದ್ರಪದಾ ವಾರ: ರವಿ, ಶನಿ, ಕುಜ ತಿಥಿ: ದ್ವಿತೀಯ(2), ಸಪ್ತಮಿ(7), ದ್ವಾದಶಿ(12) . ಈ ಮೂರರಲ್ಲಿ ಅಂದರೆ ನಕ್ಷತ್ರ+ವಾರ+ತಿಥಿ 3 ಸೇರಿದರೆ ತ್ರಿಪುಷ್ಕರ ಯೋಗ, ನಕ್ಷತ್ರ+ವಾರ ಅಥವಾ ನಕ್ಷತ್ರ+ತಿಥಿ ಸೇರಿದರೆ ದ್ವಿಪುಷ್ಕರ ಯೋಗ ಅಥವಾ ಮೃಗಶಿರಾ, ಚಿತ್ರಾ, ಧನಿಷ್ಠ ಈ ನಕ್ಷತ್ರವಿದ್ದರೂ ದ್ವಿಪುಷ್ಕರ ಯೋಗ ಎನ್ನುತ್ತಾರೆ. ಇಂಥ ತ್ರಿಪುಷ್ಕರ ಅಥವಾ ದ್ವಿಪುಷ್ಕರ ಯೋಗದಲ್ಲಿ ಮೃತರಾದಲ್ಲಿ ವಂಶಕ್ಕೆ ಅರಿಷ್ಠವಾದ್ದರಿಂದ ಶಾಂತಿಯನ್ನು ಮಾಡಿಸಬೇಕು. ಇಲ್ಲವಾದರೆ ಒಂದು ವರ್ಷದೊಳಗೆ ಮತ್ತೆ ಏನಾದರೂ ಅವಗಡ ಆಗಬಹುದು.

4. **ಹೆಣವನ್ನು (ಸತ್ತ ವ್ಯಕ್ತಿ) ಯಾರು ಹೊರಬೇಕು?** ಒಂದು ವೇಳೆ ತಂದೆ-ತಾಯಿಗಳಾದಲ್ಲಿ ಮಕ್ಕಳು ಮತ್ತು ಬಂಧುಗಳು ಹೆಣವನ್ನು ಹೊರಬೇಕು. ಇದು ಮಹಾಪುಣ್ಯದ ಕೆಲಸ (ಸೇವೆ). ಇದನ್ನು ಎಲ್ಲರೂ ನಿರ್ವಹಿಸಬಹುದು. ಈ ವಿಷಯದಲ್ಲಿ ಬರುವ ಸಮಸ್ಯೆಗಳೆಂದರೆ ಅಪ್ಪ-ಅಮ್ಮ ಬದುಕಿರುವವರು ಹೆಣಹೊರಬಹುದೇ? ಪತ್ನಿಯು ಋತುಮತಿ ಆಗಿದ್ದಾಳೆ ಅದಕ್ಕೆ ನಾನು ಹೊರಬಹುದೆ? ಪತ್ನಿಯು ಗರ್ಭಿಣಿ. ಹಾಗಾಗಿ ಹೆಣ ಹೊರಬಹುದೆ? ಮುಂದಿನ ತಿಂಗಳು ನನ್ನ ವಿವಾಹವಿದೆ ಹಾಗಾಗಿ ನಾನು ಹೆಣ ಹೊರಬಹುದೆ? ಹೀಗೆ ಇನ್ನೇನೋ ಸಮಸ್ಯೆಗಳು. ಇದಕ್ಕೆಲ್ಲ ಒಂದೇ ಉತ್ತರವೆಂದರೆ ಎಲ್ಲರೂ ಹೆಣ ಹೊರಬಹುದು. ಹೀಗಿದ್ದವರು ಮಾಡಬಾರದೆಂದು ಯಾವ ಶಾಸ್ತ್ರದಲ್ಲಿಯೂ ಹೇಳಿಲ್ಲ. ಬದಲಿಗೆ ಮಾಡಬೇಕು, ಇದು ಪುಣ್ಯದ ಕೆಲಸ ಎಂದು ಗರುಡ ಪುರಾಣ ಮತ್ತು ಕಾಲಮಾಧವ ಗ್ರಂಥದಲ್ಲಿ ಉಲ್ಲೇಖವಿದೆ

5. **ಹೆಣ ಸುಡುವ ಜಾಗಕ್ಕೆ ಯಾರು ಹೋಗಬಹುದು?** ಹೆಣ ಸುಡುವ ಸ್ಥಳಕ್ಕೆ ಎಲ್ಲರೂ ಹೋಗಬಹುದು. ಆದರೆ ಅಂಜಿಕೆ (ಹೆದರಿಕೆ) ಇರುವವರು ಹೋಗುವುದು ಬೇಡ. ಕೆಲವೊಂದು ಪ್ರಾಂತದಲ್ಲಿ ಸ್ತ್ರೀಯರು ಹೋಗುವುದಿಲ್ಲ. ಅದು ಅವರವರ ಸಂಪ್ರದಾಯಕ್ಕೆ ಬಿಟ್ಟಿರುವಂಥದ್ದು. ಕೆಲವೊಂದು ಶಾಸ್ತ್ರಕ್ಕಿಂತ

ಸಂಪ್ರದಾಯ ಗಟ್ಟಿಯಾಗಿ ನಮ್ಮಲ್ಲಿದೆ. ಅದನ್ನು ಬದಲಿಸುವುದು ಕಷ್ಟ. ಆದರೆ ಅಂತ್ಯದರ್ಶನ ಎಲ್ಲರೂ ಪಡೆಯಬಹುದು.

6. **ಅಸ್ಥಿಸಂಚಯ ಯಾವಾಗ ಮಾಡಬೇಕು?** ವ್ಯಕ್ತಿ ಮರಣ ಹೊಂದಿದ ದಿನ ದಹನ ಕ್ರೀಯೆ ಇರುತ್ತದೆ. 2ನೇ ದಿನ ಕೆಲವರು ಹೋಗಿ ಆಚೆ ಈಚೆ ಬಿದ್ದ ಕಟ್ಟಿಗೆ ಮುಂತಾದವುಗಳನ್ನು ಸೇರಿಸಿ ಸುಡುತ್ತಾರೆ. 3ನೇ ದಿನ ಅಥವಾ ಬೆಸದಿನಗಳಲ್ಲಿ ಅಸ್ತಿ ಸಂಚಯನ ಮಾಡುತ್ತಾರೆ ಮತ್ತು ಅಂದೇ ನದಿ ಅಥವಾ ಪವಿತ್ರ ನದಿ ಸಂಗಮದಲ್ಲಿ ವಿಸರ್ಜನೆ ಮಾಡುತ್ತಾರೆ. ಒಂದು ವೇಳೆ ಕೆಲವೊಬ್ಬರು ಗಂಗಾ ನದಿಯಲ್ಲೇ ಬಿಡಲು ನಿರ್ಧರಿಸಿದ್ದಲ್ಲಿ ಅಸ್ತಿಯನ್ನು ಶುದ್ಧಿಗೊಳಿಸಿ ವಸ್ತ್ರದಲ್ಲಿ ಸುತ್ತಿ ಮನೆಯಿಂದ ದೂರದಲ್ಲಿರುವ ಮರ ಗಿಡ ಅಥವಾ ಮರದ ಪೊಟರೆಯಲ್ಲಿ ಇಡಬೇಕು. ಯಾತ್ರೆಗೆ ಹೋರಡುವಾಗ ಕೊಂಡು ಹೋಗಬೇಕು.

7. **ಸಂಬಂಧಿಗಳು ಮೃತರ ಮನೆಗೆ ಮಾತನಾಡಿಸಲು ಯಾವಾಗ ಹೋಗಬೇಕು?** ಮೃತರ ಸಂಬಂಧಿಗಳನ್ನು ಮಾತನಾಡಿಸಲು ಸಾಮಾನ್ಯವಾಗಿ 5,7,9 ನೇ ಬೆಸದಿನಗಳಲ್ಲಿ ಹೋಗುವುದು ಸಂಪ್ರದಾಯ. ಇದಕ್ಕೆ ಸಂಬಂಧಿಸಿದಂತೆ ಶಾಸ್ತ್ರದಲ್ಲಿ ತಿಳಿಸಿಲ್ಲ. ಇಲ್ಲಿ ಸಂಪ್ರದಾಯ ಪ್ರಧಾನ.

8. **ಮೃತರ ಸಂಸ್ಕಾರವನ್ನು ಹೇಗೆ ಮಾಡುವುದು?** ಒಂದು ವೇಳೆ ಪುರೋಹಿತರು ಲಭ್ಯವಿದ್ದಲ್ಲಿ ಒಂದನೇ ದಿನದಿಂದ 13ನೇ ದಿನದವರೆಗೆ ಕ್ರಿಯೆಯು ಇರುತ್ತದೆ. ಪುರೋಹಿತರು ಸಿಗದಿದ್ದರೆ ದಹನ ಕ್ರಿಯೆಯನ್ನು ನೀವೇ ಮಾಡಿರೆ. 3ನೇ ದಿನ ಅಸ್ತಿಸಂಚಯನ, ವಿಸರ್ಜನ ಮಾಡಿ ಆಮೇಲೆ 9ನೇ ದಿನ, 10ನೇ , 11ನೇ, 12ನೇ ದಿನದ ವಿಧಿಯನ್ನು ಮಾಡಬೇಕು. 13ನೇ ದಿನ ವೈಕುಂಠ ಸಮಾರಾಧನೆ ಅಥವಾ ಶುಭ ಸ್ವೀಕಾರವನ್ನು ಮಾಡಬೇಕು. 12 ನೇ ದಿನದಂದು ದಶ-ದಾನಗಳನ್ನು ಮಾಡಬೇಕು. 11ನೇ ದಿನ ಸೂತಕ ಹೋಗಿ ಶುದ್ಧವಾಗಬೇಕು. ಆಮೇಲೆ 21ನೇ ದಿನ, ತಿಂಗಳು ಆಗುವ ಮುನ್ನ 27ನೇ ದಿನ, ಪ್ರತಿ ತಿಂಗಳು ಮೃತ ತಿಥಿಯಲ್ಲಿ ಒಂದೊಂದರಂತೆ 6 ತಿಂಗಳ ಮುಂಚೆ ಅಂದರೆ 5 1/2 ತಿಂಗಳಿನಲ್ಲಿ ಮತ್ತು 1 ವರ್ಷದ ಒಳಗೆ 11 1/2 ತಿಂಗಳಿನಲ್ಲಿ ಹೀಗೆ 1 ವರ್ಷದ ಒಳಗೆ 16

ಮಾಸಿಕಗಳಾಗುತ್ತದೆ. ಆಮೇಲೆ ವರ್ಷಾಂತಕ ಮಾಡಬೇಕು. ಇದು ಸಾಮಾನ್ಯವಾಗಿ ಎಲ್ಲಾ ಕಡೆ ಇರುವ ಸಂಸ್ಕಾರದ ವಿಧಾನ.

9. **ಮೃತರ 12ನೇ ದಿನದಂದು ಮಾಡಬೇಕಾದ ದಾನಾದಿಗಳು ಯಾವುದು?** ಅತೀ ಮುಖ್ಯವಾದುದು ಶಯ್ಯಾದಾನ (ಜಮಖಾನಾ, ಗಾದಿ, ಚಾದರ, ತಲೆದಿಂಬು, ಹೊದಿಕೆ), ಗೋದಾನ, ಕೊಡೆ, ಚಪ್ಪಲಿ, ಉಂಗುರ, ವಸ್ತ್ರ, ಕಲಶ, ಪಂಚಪಾತ್ರೆ, ಆಸನ, ಊರುಗೋಲು, ತಾಮ್ರಪಾತ್ರೆ, ಕಮಂಡಲ, ಧಾನ್ಯ, ಪಕ್ವಾನ್ನ [ಸಿಹಿ ತಿಂಡಿಗಳು], ಹಣ, ದೀಪ, ಯಜ್ಞೋಪವೀತ, ರುದ್ರಾಕ್ಷಿಮಾಲೆ, ಭಗವದ್ಗೀತೆ, ವಿಷ್ಣು, ಸಹಸ್ರನಾಮ ಪುಸ್ತಕ ಇತ್ಯಾದಿ ದಾನಗಳನ್ನು ಮೃತರ ಸದ್ಗತಿಗಾಗಿ ಮಾಡಲೇಬೇಕು.

10. **ಈ ದಾನಾದಿಗಳ ಮಹತ್ವ ಏನು?** ಮೃತರ ಸದ್ಗತಿಗಾಗಿ ಮಾಡುವ (12ನೇ ದಿನ) ದಾನಕ್ಕೆ ಅತ್ಯಂತ ಮಹತ್ವವಿದೆ. ಈ ವಿಷಯದಲ್ಲಿ ಅನೇಕ ಪುರಾಣಗಳಲ್ಲಿ ದಾನಗಳ ಬಗ್ಗೆ ತಿಳಿಸಿದೆ. ಅದರಲ್ಲಿ ಗರುಡ ಪುರಾಣವು ಮುಖ್ಯವಾದುದು. ಅದರಂತೆ ಹೀಗಿದೆ, ಒಬ್ಬ ವ್ಯಕ್ತಿ ಮೃತವಾದ ಮೇಲೆ ದೇಹದಿಂದ ಹೊರ ಬಂದ ಆತ್ಮವು 10 ದಿನಗಳ ಕಾಲ ಮನೆಯಲ್ಲಿಯೇ ಇರುತ್ತದೆ. ಆಮೇಲೆ 11ನೇ ದಿನ ಆತ್ಮಕ್ಕೆ ಸೂಕ್ಷ್ಮ ರೂಪ ದೊರೆಯುತ್ತದೆ. ಇದು ಪ್ರೇತವೆನ್ನಬಹುದು. ಈ ಸೂಕ್ಷ್ಮ ಶರೀರವು ತಾನು ಮಾಡಿದ ಪಾಪ ಪುಣ್ಯದ ಫಲವನ್ನು ತೆಗೆದುಕೊಂಡು ತನ್ನ ಪರಲೋಕ ಯಾತ್ರೆಯನ್ನು ಆರಂಭಿಸುತ್ತದೆ. ಈ ಮಾರ್ಗವು ಅತಿಕಷ್ಟಕರವಾದುದು. ಈ ಮಾರ್ಗವನ್ನು ಕ್ರಮಿಸಲು, ಕಷ್ಟದಿಂದ ಪಾರಾಗಲು 12ನೇ ದಿನ ಸಂಕಲ್ಪ ಮಾಡಿದ ದಾನಗಳು ನೆರವಾಗುತ್ತವೆ. ಅವರ ಕಷ್ಟ ಪರಿಹಾರವು ನಮ್ಮ ಶ್ರೇಯೋಭಿವೃದ್ಧಿಗೆ ಅನುಕೂಲವಾಗುತ್ತದೆ.

a) **ಶಯ್ಯಾದಾನ -** ಈ ದಾನ ಸತ್ಪಾತ್ರರಿಗೆ ಕೊಡುವುದರಿಂದ ಅವನ ಪಿತೃಗಳು ಇಹ ಮತ್ತು ಪರಲೋಕದಲ್ಲಿ ಆನಂದದಿಂದ ಇರುತ್ತಾರೆ. ನರಕಕ್ಕೆ ಹೋಗುವುದಿಲ್ಲ. ಅಲ್ಲದೆ ಎಲ್ಲಾ ಪರ್ವ ತಿಥಿಗಳಲ್ಲಿ ಪುಣ್ಯ ನದಿಗಳಲ್ಲಿ ಸ್ನಾನ ಮತ್ತು ದಾನ ಮಾಡಿದುದಕ್ಕಿಂತ ಹೆಚ್ಚಿನ ಪುಣ್ಯ ಸಿಗುತ್ತದೆ.

b) **ಗೋದಾನ** - ಜೀವನದಲ್ಲಿ ಮಾಡಿದ ಎಲ್ಲಾ ಪಾಪ ಪರಿಹಾರವಾಗಿ ಮೋಕ್ಷ ಪ್ರಾಪ್ತಿಗಾಗಿ ಮಾಡಬೇಕು.

c) **ಛತ್ರ (ಕೊಡೆ) ದಾನ** - ಯಮಲೋಕಕ್ಕೆ ಹೋಗುವ ಮಾರ್ಗದಲ್ಲಿ ಸೂರ್ಯನ ತಾಪವು ಅತಿಯಾಗಿರುತ್ತದೆ. ಅದರಿಂದ ಜೀವನು ಸುಟ್ಟು ಹೋಗುತ್ತಾನೆ. ಆಗ ನಾವು ಇಲ್ಲಿ ದಾನ ಮಾಡಿದ ಛತ್ರವು ಅವರಿಗೆ ನೆರಳನ್ನು ಕೊಡುತ್ತದೆ.

d) **ಚಪ್ಪಲಿ ದಾನ** - ಯಮಲೋಕದ ಮಾರ್ಗವು ಅತ್ಯಂತ ಕಷ್ಟದ ಮಾರ್ಗ. ಇದು ಕಲ್ಲು ಮುಳ್ಳುಗಳಿಂದ ತುಂಬಿರುತ್ತದೆ. ನಾವು ಮಾಡಿದ ಈ ದಾನದಿಂದ ಅವರಿಗೆ ಮಾರ್ಗಕ್ರಮಿಸಲು ಅನುಕೂಲವಾಗುತ್ತದೆ.

e) **ವಸ್ತ್ರ ದಾನ** - ಯಮಲೋಕದ ಮಾರ್ಗದಲ್ಲಿ ಅತಿ ಶೀತ ಮತ್ತು ಅತಿ ಉಷ್ಣ ಗಾಳಿಯಿಂದ ಬಹಳ ದುಃಖವಾಗುತ್ತದೆ. ಈ ದಾನದಿಂದ ಸುಖವಾಗಿ ದಾಟಿ ಹೋಗಬಹುದು.

f) **ಉಂಗುರ ದಾನ** - ಯಮಲೋಕದ ಮಾರ್ಗದಲ್ಲಿ ಕಪ್ಪು ಮತ್ತು ನೀಲಿ ಬಣ್ಣದ ಯಮದೂತರು ಕೊಡುವ ಕಷ್ಟದಿಂದ ಪಾರಾಗಲು ಈ ದಾನ ಅನುಕೂಲವಾಗುತ್ತದೆ. **ಕಮಂಡಲು - ಜಲಪಾತ್ರ ದಾನ** - ಯಮಲೋಕಕ್ಕೆ ಹೋಗುವಾಗ ಕೆಲವು ಕಡೆ ಗಾಳಿ ಮತ್ತು ನೀರು ಸಿಗುವುದಿಲ್ಲ. ಈ ದಾನದಿಂದ ಅವರಿಗೆ ಆಗ ಅನುಕೂಲವಾಗುತ್ತದೆ.

g) **ತಾಮ್ರದ ಜಲಪಾತ್ರ ದಾನ** - ಮೃತರ ಉದ್ದಿಶ್ಯವಾಗಿ ಯಾರು ಈ ದಾನವನ್ನು ಮಾಡುತ್ತಾರೋ ಅವರಿಗೆ ಸಾವಿರ ನೀರಿನ ಪಾತ್ರೆಯನ್ನು ಜನರಿಗಾಗಿ ಹೊರಗೆ ಇಟ್ಟ ಪುಣ್ಯ ದೊರೆಯುತ್ತದೆ.

h) **ಆಸನ, ಭೋಜನಪಾತ್ರೆ ದಾನ** - ಈ ದಾನದಿಂದ ಯಮಲೋಕ ಮಾರ್ಗ ಕ್ರಮಿಸುವಾಗ ಆಯಾಸವಾಗದಿರಲು ನಾವು ಕೊಟ್ಟ ಭೋಜನ ದೊರೆಯುತ್ತದೆ.

i) **ಕುಂಭ ದಾನ** - ಪ್ರೇತದ ಉದ್ದಿಶ್ಯ ಈ ದಾನವನ್ನು ಮಾಡುವುದರಿಂದ ಪ್ರೇತಕ್ಕೆ ಅನಂತ ರೀತಿಯ ತೃಪ್ತಿ ಸಿಗುತ್ತದೆ.

j) **ದೀಪ ದಾನ** - ಮೃತರ ಉದ್ದಿಶ್ಯ ಈ ದಾನವನ್ನು ಮಾಡುವುದರಿಂದ ಘೋರ ಕತ್ತಲೆ ಮತ್ತು ಕಷ್ಟದಿಂದ ಕೂಡಿದ ಯಮಲೋಕದ ಮಾರ್ಗವನ್ನು ಕ್ರಮಿಸುವಾಗ

ಅವರಿಗೆ ದಾರಿದೀಪವಾಗಿ ಅನುಕೂಲ ಮಾಡಿಕೊಡುತ್ತದೆ. ಹೀಗೇ ನಾವು ಶ್ರದ್ಧಾ-ಭಕ್ತಿಯಿಂದ ಮಾಡುವ ಪ್ರತಿಯೊಂದು ದಾನವು ಆತ್ಮಕ್ಕೆ ಸದ್ಗತಿ ದೊರೆಯಲು ಅನುಕೂಲ ಮಾಡಿಕೊಡುತ್ತದೆ. ಆದ್ದರಿಂದ ಸಂಸ್ಕಾರಾದಿಗಳನ್ನು ಮತ್ತು ದಾನವನ್ನು ಸರಿಯಾಗಿ ಮಾಡಬೇಕು.

11. **ಮನೆಯಲ್ಲಿ ಹಿರಿಯರು ಮೃತರಾದರೆ ಒಂದು ವರ್ಷದ ಒಳಗೆ ವಿವಾಹಾದಿ ಅಥವಾ ಉಪನಯನ ಇತ್ಯಾದಿ ಶುಭಕಾರ್ಯವನ್ನು ಮಾಡಬಹುದೆ?** ಮನೆಯಲ್ಲಿ ಹಿರಿಯರು ಅಥವಾ 11 ದಿನದ ದಾಯಾದಿಗಳು, ತಂದೆ-ತಾಯಿ ಇವರು ಮೃತರಾದರೆ ಒಂದು ವರ್ಷದ ಕಾಲ ಶುಭ ಕಾರ್ಯವನ್ನು ಮಾಡಬಾರದು. ಕೆಲವರು ಈ ವಿಷಯದ ಬಗ್ಗೆ ತಪ್ಪು ತಿಳುವಳಿಕೆಯನ್ನು ಹೊಂದಿದ್ದಾರೆ. ಅಂದರೆ ಒಂದು ವರ್ಷದ ಒಳಗೆ ಶುಭ ಕಾರ್ಯ ಮಾಡಬೇಕು. ಇಲ್ಲವಾದಲ್ಲಿ 3 ವರ್ಷಗಳ ಪರ್ಯಂತ ಮಾಡಬಾರದು ಎಂದು. ಇದು ತಪ್ಪು ಅನಿಸಿಕೆ. 1 ವರ್ಷದ ಒಳಗೆ ಶುಭಕಾರ್ಯ ಮಾಡಬೇಡಿ. ಏಕೆಂದರೆ ಕಾಲಮಾನರೀತ್ಯಾ ನಮ್ಮ 1 ವರ್ಷ ಮೃತರಿಗೆ 1 ದಿನ ಇದ್ದಂತೆ. ನಾವು ಪ್ರತಿ ತಿಂಗಳು ಮಾಡುವ ಮಾಸಿಕವು ಪಿತೃಗಳಿಗೆ ಪ್ರತಿ ಘಂಟೆಗೆ ಮಾಡಿದಂತೆ. ಯಾವ ರೀತಿಯಾಗಿ ಮೃತ 11 ದಿನಗಳವರೆಗೆ ಯಾವುದೇ ಶುಭ ಕಾರ್ಯ ಮಾಡುವುದಿಲ್ಲವೋ ಹಾಗೇ 1 ವರ್ಷದೊಳಗೂ ಮಾಡಬಾರದು. ವರ್ಷಾಂತಕ ಆದಮೇಲೆ ಮಾಡಬೇಕು. ಒಂದು ವೇಳೆ ಮಾಡಲೇಬೇಕಾದ ಪರಿಸ್ಥಿತಿ ಇದ್ದಲ್ಲಿ ವಿನಾಯಕ ಶಾಂತಿ ಮಾಡಿ ಶುಭ ಕಾರ್ಯ ಮಾಡಬೇಕು. ಹೆಣ್ಣು ಮಕ್ಕಳ ವಿವಾಹ ಮಾಡುವ ಸಂದರ್ಭವಿದ್ದಲ್ಲಿ ಮಾಡಬಹುದು ಯಾಕೆಂದರೆ ಅದು ಕನ್ಯಾದಾನ ಹಾಗಾಗಿ ದಾನಗಳಲ್ಲಿ ಸೇರುತ್ತದೆ.

12. **ತಂದೆ-ತಾಯಿಗಳು ಮೃತವಾದಲ್ಲಿ ಒಂದು ವರ್ಷದ ಒಳಗೆ ತೀರ್ಥ ಕ್ಷೇತ್ರದಲ್ಲಿ ಶ್ರಾದ್ಧ ಅಥವಾ ಗಯಾದಲ್ಲಿ ಶ್ರಾದ್ಧ ಮಾಡಬಹುದೆ?** ಮೃತರ ವರ್ಷಾಂತಕ ಆದ ಮೇಲೆ ಗಯಾ ಶ್ರಾದ್ಧ ಅಥವಾ ತೀರ್ಥ ಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡಲಿಕ್ಕೆ ಬರುತ್ತದೆ. ಗರುಡ ಪುರಾಣದಲ್ಲಿ ತಿಳಿಸಿದಂತೆ ಒಂದು ವರ್ಷದ ಒಳಗೆ ಬರುವುದಿಲ್ಲ.

13. **"ನಾವು ಪಿತೃಗಳ ಅಸ್ತಿಯನ್ನು ಗಂಗಾನದಿಯಲ್ಲಿ ಬಿಡಬೇಕೆಂದು ಸಂಕಲ್ಪಿಸಿದ್ದೇವೆ". ವಿಧಾನ ತಿಳಿಸಿ.** ಗಂಗಾನದಿ ಅಥವಾ ಪ್ರಯಾಗದಲ್ಲಿ ಅಸ್ತಿವಿಸರ್ಜನೆ ಮಾಡಬೇಕು ಎಂದು ನಿರ್ಧಾರವಿದ್ದಲ್ಲಿ ಅಸ್ತಿಯನ್ನು ಶುದ್ಧಗೊಳಿಸಿ ಇಟ್ಟಿರಬೇಕು. ಎಲ್ಲಿ ವಿಸರ್ಜನೆ ಮಾಡಬೇಕೊ ಆ ಕ್ಷೇತ್ರಕ್ಕೆ ಹೋದಾಗ, ವಿಸರ್ಜನೆಗೆ ಮೊದಲು ಪಂಚಗವ್ಯ ಪ್ರೋಕ್ಷಣೆ ಮಾಡಬೇಕು. ಸುವರ್ಣ, ಜೇನುತುಪ್ಪ, ತುಪ್ಪ ಮತ್ತು ಕಪ್ಪು ಯಳ್ಳು ಸೇರಿಸಿ ಮಣ್ಣಿನಲ್ಲಿ ಕಲಸಿ ಅಸ್ತಿ ಮಧ್ಯದಲ್ಲಿ ಇಟ್ಟು ಮಣ್ಣಿನ ಉಂಡೆಯಂತೆ ಮಾಡಿ, ನೀರಿನಲ್ಲಿ ಇಳಿದು ದಕ್ಷಿಣಕ್ಕೆ ಮುಖಮಾಡಿ ನಿಂತುಕೊಂಡು "ನಮೋಸ್ತು ಧರ್ಮಾಯ ಸಮೇ ಪ್ರೀತಃ" ಎನ್ನುತ್ತ ನೀರಿನಲ್ಲಿ ವಿಸರ್ಜನೆ ಮಾಡಿರಿ. ಸೂರ್ಯನನ್ನು ನೋಡಿ ನಮಸ್ಕಾರಮಾಡಬೇಕು. ಬ್ರಾಹ್ಮಣರಿಗೆ ದಾನವನ್ನು ಕೊಡಬೇಕು. ಆಗ ಪಿತೃಗಳಿಗೆ ಮೋಕ್ಷದೊರೆಯುತ್ತದೆ (ಬ್ರಹ್ಮಾಂಡ ಪುರಾಣ).

14. **ನಿಧನರಾದ ವ್ಯಕ್ತಿಯು ಉಪಯೋಗಿಸುತ್ತಿದ್ದ ವಸ್ತುಗಳು, ಹಾಸಿಗೆ ಮೊದಲಾದವುಗಳನ್ನು ಏನು ಮಾಡಬೇಕು?** ಇಲ್ಲಿ ಗತಿಸಿದ ವ್ಯಕ್ತಿಯ ಇಚ್ಛೆಯಂತೆ ಮಾಡುವುದು ಒಂದು. ಇಲ್ಲವಾದರೆ ಎಲ್ಲಿಯಾದರು ವಿಸರ್ಜನೆ ಮಾಡಬೇಕು ಅಥವಾ ಬಡವರಿಗೆ ದಾನವಾಗಿ ನೀಡಬಹುದು. ಕೆಲವಸ್ತುಗಳನ್ನು ಅವರ ಸ್ಮರಣಾರ್ಥ ಇಟ್ಟುಕೊಳ್ಳಬಹುದು.

15. **ಪ್ರಥಮ ವಾರ್ಷಿಕ ಶ್ರಾದ್ಧವಾದ ಮೇಲೆ ಮುಂಬರುವ ವರ್ಷಗಳಲ್ಲಿ ಶ್ರಾದ್ಧವನ್ನು ಆಚರಿಸುವ ನಿಯಮ ಏನು?** ಪ್ರಥಮ ವಾರ್ಷಿಕ ಶ್ರಾದ್ಧ ಅಥವಾ ವರ್ಷಾಂತಕವಾದ ಮೇಲೆ ಮುಂದೆ ಬರುವ ಶ್ರಾದ್ಧವನ್ನು ಮೃತವಾದ ಮಾಸ (ಚೈತ್ರಾದಿ ಇರಬಹುದು ಮೇಷಾದಿ ಇರಬಹುದು), ಮೃತ ತಿಥಿಯಂದು (ಪತಿಪದಾ, ದ್ವಿತಿಯ, ತೃತೀಯ) ಶ್ರಾದ್ಧವನ್ನು ಮಾಡಬೇಕು. ಮೃತ ದಿನಾಂಕದಂದು ಮಾಡಬಾರದು. ಶ್ರಾದ್ಧವನ್ನು ಹಿಂದೂ ಪಂಚಾಗದ ಮಾಸ ತಿಥಿಯಂತೆ ಆಚರಿಸುವುದು ಶಾಸ್ತ್ರೋಕ್ತವಾದುದು. ಇದು ಧಾರ್ಮಿಕ ಸಂಸ್ಕಾರವಿದ್ದು ಧಾರ್ಮಿಕ ವಿಧಿ ವಿದಾನದಂತೆ ಆಚರಿಸಬೇಕು. (ದಿನಾಂಕದಂತೆ ಮಾಡುವುದು ಶ್ರಾದ್ಧವಾಗಿರದೆ ಪುಣ್ಯ ತಿಥಿ ಎನ್ನಿಸಿಕೊಳ್ಳುತ್ತದೆ). ಮೃತರ

ಫೋಟೊ ಇಟ್ಟು, ಮಾಲೆ ಹಾಕಿ ನಮಸ್ಕಾರ ಮಾಡಿ ಅವರ ಬಗೆಗೆ ಮಾತನಾಡಿ ಎಲ್ಲರೂ ಸೇರಿ ಊಟ ಮಾಡುವುದು ಶ್ರಾದ್ಧವೆನಿಸುವುದಿಲ್ಲ. ಇಲ್ಲಿ ವಿಧಿಯು ಮುಖ್ಯವಾಗಿರುತ್ತದೆ.

16. **ಮೃತವಾದ ಮಾಸ ಗೊತ್ತಿದ್ದು ತಿಥಿ ಗೊತ್ತಿರದೆ ಇದ್ದಲ್ಲಿ, ತಿಥಿ ಗೊತ್ತಿದ್ದು ಮಾಸ ಗೊತ್ತಿರದಿದ್ದಲ್ಲಿ, ಅಥವಾ ಮಾಸ ಮತ್ತು ತಿಥಿ ಎರಡು ಗೊತ್ತಿರದಿದ್ದಲ್ಲಿ ಶ್ರಾದ್ಧವನ್ನು ಹೇಗೆ ಮಾಡಬೇಕು?** ಮೃತವಾದ ಮಾಸ ಗೊತ್ತಿದ್ದು ತಿಥಿ ಗೊತ್ತಿರದಿದ್ದಲ್ಲಿ ಆ ಮಾಸದ ಏಕಾದಶಿ ಅಥವಾ ಅಮವಾಸ್ಯೆಯಂದು ಶ್ರಾದ್ಧವನ್ನು ಮಾಡಬೇಕು. ಮೃತರ ತಿಥಿ ಗೊತ್ತಿದ್ದು ಮಾಸ ಗೊತ್ತಿರದಿದ್ದಲ್ಲಿ ಭಾದ್ರಪದ, ಮಾರ್ಗಶೀರ್ಷ, ಮಾಘ ಈ ಮಾಸದ ಆ ತಿಥಿಯಲ್ಲಿ ಮಾಡಬೇಕು. ಒಂದು ವೇಳೆ ಮೃತರ ಮಾಸ ಮತ್ತು ತಿಥಿ ಎರಡೂ ಗೊತ್ತಿರದಿದ್ದಲ್ಲಿ ಭಾದ್ರಪದ, ಮಾರ್ಗಶೀರ್ಷ, ಮಾಘ ಈ ಮಾಸಗಳ ಅಮವಾಸ್ಯೆಯ ದಿನ ಮಾಡಬೇಕು (ಭವಿಷ್ಯೋತ್ತರ ಪುರಾಣ , ನಿರ್ಣಯ ಸಿಂಧು 476)

17. **ಶ್ರಾದ್ಧವೆಂದರೇನು? ಯಾಕಾಗಿ ಮಾಡಬೇಕು? ಮೃತವಾಗಿ ಎಷ್ಟು ವರ್ಷಗಳಾದರೂ ಮಾಡಬೇಕೇ? ಪುನರ್ಜನ್ಮದಲ್ಲಿ ಯಾವುದೇ ಜೀವಿಯಾಗಿ ಭೂಮಿಗೆ ಬಂದರೆ ನಾವು ಮಾಡಿದ ಶ್ರಾದ್ಧದ ಫಲ ಏನು?** ಶ್ರದ್ಧೆಯಿಂದ, ಅಚಲವಾದ ನಂಬಿಕೆಯಿಂದ ಮಾಡುವ ಪಿತೃಕಾರ್ಯವನ್ನು ಶ್ರಾದ್ಧ ಎನ್ನುವರು. ಜನಿಸುವಾಗ ಪಡೆದುಕೊಂಡು ಬಂದ ಪಿತೃ ಋಣವನ್ನು ತೀರಿಸಲು ಇದು ಮುಖ್ಯ ಸಾಧನ. ನಮ್ಮ ಶ್ರೆಯೋಭಿವೃದ್ಧಿಗೆ ಸ್ವರ್ಗಸ್ಥ ಪಿತೃಗಳ ಆಶೀರ್ವಾದ ಅನುಗ್ರಹವೇ ಮೂಲ ಕಾರಣವೆಂಬುದು ಎಲ್ಲಾ ಮೂಲಗ್ರಂಥಗಳೂ ಸಾರುತ್ತವೆ. ಹಾಗಾಗಿ ನಮ್ಮ ಶ್ರೇಯೋಭಿವೃದ್ಧಿ ಮತ್ತು ಪಿತೃ ಋಣ ತೀರಿಸಲು, ಪಿತೃಗಳಿಗೆ ಸದ್ಗತಿಯನ್ನು ದೊರಕಿಸಲು ಶ್ರಾದ್ಧವನ್ನು ಮಾಡಬೇಕು. ಹೇಗೆ ನಾವು ಜನ್ಮಾಂತರದಲ್ಲಿ ಮಾಡಿದ ಪುಣ್ಯ ಮತ್ತು ಪಾಪದ ಫಲವನ್ನು ಈ ಜನ್ಮದಲ್ಲಿ ಅನುಭವಿಸುತ್ತೇವೊ ಹಾಗೆಯೆ ನಾವು ಮಾಡಿದ ಶ್ರಾದ್ಧ ಮತ್ತು ತರ್ಪಣದ ಅಗೋಚರ ಪುಣ್ಯ ಫಲದ ಶಕ್ತಿಯು ಪಿತೃಗಳ ಹೆಸರಿಸಲ್ಲಿ ಸಂಗ್ರಹವಾಗಿ, ಯಾವುದೇ ಜೀವಿಯಾಗಿ ಭೂಮಿಗೆ ಬಂದಿದ್ದರೂ ಸಹ ಅವರಿಗೆ ಆ ಫಲವು

ಸಿಗುತ್ತದೆ. ಮುಂದೆ ಮೋಕ್ಷಕ್ಕೆ ಕಾರಣವಾಗುತ್ತದೆ. ಆದ್ದರಿಂದ ನಮ್ಮ ಅಂತ್ಯದವರೆಗೂ ನಮ್ಮ ಮುಖ್ಯ ಕರ್ತವ್ಯವಾದ ದೇವ ಮತ್ತು ಪಿತೃಗಳ ಕಾರ್ಯವನ್ನು ತಪ್ಪದೇ ಮಾಡಬೇಕು. ಇದು ವೇದ ವಾಕ್ಯ.

18. **ಶ್ರಾದ್ಧದಲ್ಲಿ ಎಷ್ಟು ವಿಧಗಳು? ಯಾವುದು? ಕ್ರಮವೇನು?** ಅ) ನಿತ್ಯ ಶ್ರಾದ್ಧ ಆ) ನೈಮಿತ್ತಿಕ ಶ್ರಾದ್ಧ ಇ) ಕಾಮ್ಯ ಶ್ರಾದ್ಧ ಈ) ವೃದ್ಧಿ ಶ್ರಾದ್ಧ ಉ) ಪಾರ್ವಣ ಶ್ರಾದ್ಧ ಹೀಗೆ ವಿಧಗಳಿವೆ. ಅ) ನಿತ್ಯ ಶ್ರಾದ್ಧ: ಪಿತೃಗಳ ಮೋಕ್ಷಕಾಮನೆಯಿಂದ ನಿತ್ಯವೂ ಫಲ- ಮೂಲಾದಿಗಳಿಂದ ಮಾಡುವ ಶ್ರಾದ್ಧ. ಆ) ನೈಮಿತ್ತಿಕ ಶ್ರಾದ್ಧ: ಪ್ರತಿ ತಿಂಗಳು ಅಮಾವಾಸ್ಯೆಯಲ್ಲೂ, ಸೂರ್ಯ ಚಂದ್ರ, ಗ್ರಹಣ ಕಾಲದಲ್ಲೂ, ಉತ್ತರಾಯಣ-ದಕ್ಷಿಣಾಯನ, ಪುಣ್ಯ ಕಾಲದಲ್ಲಿ, ಸಂಕ್ರಮಣ ಕಾಲದಲ್ಲಿ, ಅಪರ ಪಕ್ಷದಲ್ಲಿ, ಮಹಾ ಭರಣಿ, ಮಧ್ಯ ಅಷ್ಟಮಿ, ವ್ಯತೀಪಾತದಲ್ಲಿ ವಿಶೇಷ ನಿಮಿತ್ತವಾಗಿ ಮಾಡುವ ಶ್ರಾದ್ಧ. ಇ) ಕಾಮ್ಯ ಶ್ರಾದ್ಧ: ನಮ್ಮ ಶ್ರೇಯೋಭಿವೃದ್ಧಿಗಾಗಿ ಗಯಾ- ಪ್ರಯಾಗ ಮೊದಲಾದ ತೀರ್ಥ ಕ್ಷೇತ್ರಗಳಲ್ಲಿ ಮಾಡುವ ಶ್ರಾದ್ಧ. ಈ) ವೃದ್ಧಿ ಶ್ರಾದ್ಧ: ವಿವಾಹ-ಉಪನಯನಾದಿ ಅಭ್ಯುದಯದ ಅಂಗವಾಗಿ ಮಾಡುವ ಶುಭ ಕಾರ್ಯದಲ್ಲಿ ಪಿತೃಗಳ ಅನುಗ್ರಹ ಪ್ರಾಪ್ತಿಗಾಗಿ ಮಾಡುವ ನಾಂದಿ ಸಮಾರಾಧನಕ್ಕೆ ವೃದ್ಧಿ ಶ್ರಾದ್ಧ ಎನ್ನುತ್ತಾರೆ. ಉ) ಪಾರ್ವಣ ಶ್ರಾದ್ಧ: ಪ್ರತಿ ವರ್ಷವೂ ಮೃತಮಾಸದ ತಿಥಿಯಂದು ಪಿತೃಗಳನ್ನು ಉದ್ದೇಶಿಸಿ ಮಾಡುವ ಶ್ರಾದ್ಧಕ್ಕೆ ಪಾರ್ವಣ ಶ್ರಾದ್ಧ ಎನ್ನುತ್ತಾರೆ. ಶ್ರಾದ್ಧದಲ್ಲಿ ಪಾಣಿ ಹೋಮ, ಬ್ರಾಹ್ಮಣ ಭೋಜನ, ಪಿಂಡ ಪ್ರಧಾನ ಈ ಮೂರೂ ಅತಿ ಮುಖ್ಯದವು. ಈ ಎಲ್ಲಾ ಸೇರಿದರೆ ಶ್ರಾದ್ಧವಾಗುತ್ತದೆ. ಯಾಕೆಂದರೆ ಅವರವರು ಮಾಡಿದ ಪುಣ್ಯ ಪಾಪದ ಫಲವಾಗಿ ಕೆಲವು ಪಿತೃಗಳು ದೇವ ಲೋಕ ಸೇರಿರುತ್ತಾರೆ. ಅವರು ಪಾಣಿ ಹೋಮದಿಂದ ತೃಪ್ತರಾಗುತ್ತಾರೆ. ಇನ್ನು ಸ್ವರ್ಗ ಲೋಕವನ್ನು ಸೇರಿರುವ ಪಿತೃಗಳು ಬ್ರಾಹ್ಮಣ ಭೋಜನದಿಂದ ತೃಪ್ತರಾಗುತ್ತಾರೆ. ಮತ್ತೆ ಕೆಲವು ಪಿತೃಗಳು ಯಮಲೋಕವನ್ನು ಸೇರಿರುತ್ತಾರೆ. ಅವರು ಪಿಂಡದ ಸುತ್ತ ಹರಡುವ ಅನ್ನದಿಂದ ಅಸುರ ಲೋಕದಲ್ಲಿ ಇರುವವರು ಭೂರಿ ಭೋಜನದಿಂದ ತೃಪ್ತರಾಗುತ್ತಾರೆ. ಆದ್ದರಿಂದ ಶ್ರಾದ್ಧದ ಎಲ್ಲಾ ವಿಧಿಯನ್ನು ಮಾಡಲೇಬೇಕು.

ಅದರಿಂದ ಆಯಾ ಲೋಕವನ್ನು ಸೇರಿರುವ ಆತ್ಮ ಚೇತನವು ತೃಪ್ತವಾಗುತ್ತದೆ. ನಾವು ಪ್ರತಿ ವರ್ಷ ಮಾಡುವ ಶ್ರಾದ್ಧವು , ಪಿತೃಗಳಿಗೆ ಅವರ ಕಾಲಮಾನದಂತೆ ಪ್ರತಿ ದಿನವೂ ಶ್ರಾದ್ಧ ಮಾಡಿ ತೃಪ್ತಿಪಡಿಸಿದಂತೆ ಆಗುವುದು.

19. **ಶ್ರಾದ್ಧ ಮಾಡಲು ಸರಿಯಾದ ಕಾಲ ಯಾವುದು?** "ಅಪರಾಹ್ನಃ ಪಿತೃಣಾಂ" ಎಂಬ ಶೃತಿ ವಾಕ್ಯದಂತೆ ಪಿತೃ ಕರ್ಮವನ್ನು ಅಪರಾಹ್ನ ಕಾಲದಲ್ಲಿ ಮಾಡಬೇಕು. ದಿನಾ ಪ್ರಮಾಣ 30 ಘಟಿ ಇರುತ್ತಿದ್ದಾಗ ಸಾಮಾನ್ಯ 4ನೇ ಭಾಗವು ಅಪರಾಹ್ನವಾಗುತ್ತದೆ. ಅಂದರೆ 18 ಘಟಿನಂತರ 24ಘಟಿ ಪರ್ಯಂತ 1:12 ರಿಂದ 3:36 ಗಂಟೆಯವರೆಗೆ ಶ್ರಾದ್ಧ ಕಾರ್ಯ ಮಾಡಬೇಕು. ಇಲ್ಲಿ ಕೆಲವು ಸಮಸ್ಯೆ ಕಾಣಬಹುದು. ಅವೆಂದರೆ 1) ಮೃತ ತಿಥಿ ಒಂದೇ ದಿನವಿದ್ದಲ್ಲಿ ತೊಂದರೆ ಇಲ್ಲ. 2) ಒಂದು ವೇಳೆ 2 ದಿನಗಳು ಮೃತ ತಿಥಿ ಬಂದಲ್ಲಿ ಯಾವ ದಿನ ಮಧ್ಯಾಹ್ನ ವ್ಯಾಪಿ ತಿಥಿ ಜಾಸ್ತಿ ಇದೆಯೋ ಆ ದಿನ ಶ್ರಾದ್ಧ ಮಾಡಬೇಕು. 3) ಎರಡೂ ದಿನಗಳು ಮೃತ ತಿಥಿ ಸಮವಿದ್ದರೆ ಮೊದಲನೇ ದಿನವೇ ಶ್ರಾದ್ಧ ಮಾಡಬೇಕು. 4) ಎರಡೂ ದಿನಗಳು ಅಪರಾಹ್ನ ವ್ಯಾಪ್ತಿ ಇರದಿದ್ದರೆ ಶ್ರಾದ್ಧವನ್ನು ಮೊದಲನೇ ದಿನ ಅಂದರೆ ಸಾಯಾಹ್ನ ಸ್ಪರ್ಶವಿರುವ ದಿನವೇ ಮಾಡಬೇಕು ಎಂದು ಕಾಲಮಾಧವ ಗ್ರಂಥದಲ್ಲಿ ತಿಳಿಸಿದೆ.

20. **ಶ್ರಾದ್ಧದ ದಿನವೇ ಸೂತಕ ಬಂದರೆ ಏನು ಮಾಡಬೇಕು?** ಶ್ರಾದ್ಧದ ದಿನವೇ ಸೂತಕ ಬಂದರೆ ಸೂತಕ ಮುಗಿದ ಮರುದಿನವೇ ಶ್ರಾದ್ಧವನ್ನು ಮಾಡಬೇಕು. ತಿಥಿಯನ್ನು ಪರಿಗಣಿಸಬೇಕೆಂದಿಲ್ಲ (ಕಾಲಮಾಧವ ಗ್ರಂಥ).

21. **ಗ್ರಹಣದ ದಿನವೇ ಶ್ರಾದ್ಧ ಬಂದರೆ ಏನು ಮಾಡಬೇಕು?** ಬೆಳಿಗ್ಗೆ ಸೂರ್ಯಗ್ರಹಣವಿದ್ದರೆ ಗ್ರಹಣ ಬಿಟ್ಟ ಬಳಿಕ ಶ್ರಾದ್ಧ ಮಾಡಬೇಕು. ಆದರೆ ಗ್ರಸ್ತಾಸ್ತ ಗ್ರಹಣವಿದ್ದು ಅಪರಾಹ್ನ ಕಾಲದಲ್ಲಿ ವೇದಕಾಲವಾದರೆ ಹಿರಣ್ಯ ಶ್ರಾದ್ಧವನ್ನು ಸಂಕಲ್ಪ ಪೂರಕ ಮಾಡಬೇಕು. ಆದರೆ ಗ್ರಹಣ ಹಿಡಿದಾಗ ಆಗಲಿ ರಾತ್ರಿಯಾಗಲಿ ಮಾಡಬಾರದು.

22. **ಸಂಕಷ್ಟಿ, ಏಕಾದಶಿ, ಮಹಾಶಿವರಾತ್ರಿ, ಮೊದಲಾದ ಉಪವಾಸದ ದಿನ ಶ್ರಾದ್ಧದ ತಿಥಿ ಇದ್ದರೆ ಹೇಗೇ ಮಾಡುವುದು?** ಮೇಲೆ ತಿಳಿಸಿದ ಯಾವ ಉಪವಾಸದ

ದಿನಗಳಲ್ಲಿ ಶ್ರಾದ್ಧವಿದ್ದರೆ ಅಂದು ಭೋಜನ ಮಾಡುವ ಬ್ರಾಹ್ಮಣರನ್ನು ಕರೆಸಿ ಭೋಜನ ಮಾಡಿಸಬೇಕು. ಶ್ರಾದ್ಧ ಮಾಡಿ ತಾನೂ ಭೋಜನ ಮಾಡಬೇಕು. ಒಂದು ವೇಳೆ ಯಜಮಾನರು ಉಪವಾಸ ಮಾಡಲೇಬೇಕು ಎಂದಿದ್ದಲ್ಲಿ ಊಟದ ತಟ್ಟೆ ಹಿಡಿದುಕೊಂಡು ಆಘ್ರಾಣಿಸಬೇಕು. ಇಲ್ಲವಾದರೆ ಅಂದು ಪಿಂಡ ಪ್ರಧಾನ ಶ್ರಾದ್ಧ ಮಾಡದೇ ಚಟಕ ಅಥವಾ ಅಮಾನ್ನ ಶ್ರಾದ್ಧ, ಹಿರಣ್ಯ ಶ್ರಾದ್ಧ ಮಾಡಬೇಕು. ಹೀಗೆಲ್ಲ ಭೇದಗಳು ಶ್ರಾಸ್ತ್ರಜ್ಞರಲ್ಲಿ ಇದೆ. ಆದರೆ ಏನೇ ಇದ್ದರೂ ಶ್ರಾದ್ಧವನ್ನು ಮಾಡಲೇಬೇಕೆಂಬುದು ಹಿರಿಯರ ಅಭಿಪ್ರಾಯ.

23. **ಯಾವುದೋ ಒಂದು ವರ್ಷ ಶ್ರಾದ್ಧ ಮಾಡಲು ಆಗದ ಸ್ಥಿತಿ ಇದ್ದರೆ ಏನು ಮಾಡಬೇಕು?** ಇದಕ್ಕೆ ಶಾಸ್ತ್ರದಲ್ಲಿ ಅನೇಕ ಮಾರ್ಗವನ್ನು ಹೇಳಿದ್ದಾರೆ. ಒಂದು ವೇಳೆ ಪಿಂಡ ಪ್ರಧಾನ ಶ್ರಾದ್ಧವನ್ನು ಮಾಡಲು ಆಗದಿದ್ದರೆ, ಸಂಕಲ್ಪ ಶ್ರಾದ್ಧ, ಹಿರಣ್ಯ, ಚಟಕ, ಅಮಾನ್ನ, ಈ ಯಾವ ವಿಧಿಯನ್ನಾದರೂ ಮಾಡಬೇಕು. ಇದು ಶಕ್ಯವಿಲ್ಲದಿದ್ದಾಗ ಬ್ರಾಹ್ಮಣರನ್ನು ಕರೆದು ಹಣ್ಣು-ಹಾಲು-ದಕ್ಷಿಣೆ ಕೊಡಬೇಕು. ಇದೂ ಶಕ್ಯವಿಲ್ಲದಿದ್ದಾಗ ಗೋಗ್ರಾಸ ಕೊಡಬೇಕು. ಅದೂ ಆಗದಿದ್ದಲ್ಲಿ ಒಂದು ಎಲೆಯಲ್ಲಿ ಅನ್ನ-ಹಾಲು-ಕರಿ ಎಳ್ಳು ಸೇರಿಸಿ ದಕ್ಷಿಣ ದಿಕ್ಕಿಗೆ ಮುಖ ಮಾಡಿ ನಿಂತುಕೊಂಡು ಪಿತೃಗಳ ಸ್ಮರಣೆಯನ್ನು ಮಾಡಿ ಕಾಗೆಗೆ ಇಡಿ. ಹೀಗೆ ಅನೇಕ ಪ್ರಕಾರದ ಮಾರ್ಗವಿದ್ದರೂ, ಆದಷ್ಟು ಕಷ್ಟವಾದರೂ ಶ್ರಾದ್ಧವನ್ನು ಮಾಡಲೇಬೇಕು ಎನ್ನುವುದು ಉದ್ದೇಶ.

24. **ಪ್ರಯಾಗ, ಗಯಾ, ಕಾಶಿ ಕ್ಷೇತ್ರಗಳಲ್ಲಿ ಶ್ರಾದ್ಧ ಮಾಡಿದ ಮೇಲೆ ಮತ್ತೆ ಶ್ರಾದ್ಧ ಮಾಡುವುದು ಬೇಡ, ಸ್ವರ್ಗಕ್ಕೆ ಹೋದ ಪಿತೃಗಳನ್ನು ಪುನ: ಕರೆದಂತೆ ಆಗುತ್ತದೆ ಎನ್ನುತ್ತಾರೆ ಹೌದಾ?** ಪ್ರಯಾಗ, ಗಯಾ, ಕಾಶಿ ಈ ಕ್ಷೇತ್ರದಲ್ಲಿ ಶ್ರಾದ್ಧ ಮಾಡಿದರೆ ಅದರಲ್ಲಿಯೂ ವಿಶೇಷವಾಗಿ ಗಯಾದಲ್ಲಿ ಶ್ರಾದ್ಧ ಮಾಡಿದರೆ ಏಳು ತಲೆಮಾರು ಮತ್ತು 101 ಕುಲದವರು ಮೋಕ್ಷ ಹೊಂದುತ್ತಾರೆ ಎಂದು ಉಲ್ಲೇಖವಿದೆ. ಅಂದರೆ ತೀರ್ಥ ಕ್ಷೇತ್ರದಲ್ಲಿ ಪಿತೃಗಳನ್ನು ಉದ್ದೇಶಿಸಿ ಮಾಡುವ ಶ್ರಾದ್ಧದಿಂದ ಪಿತೃಗಳಿಗೆ ಮೋಕ್ಷ ದೊರೆಯುತ್ತದೆ. ಆದರೂ ನಾವು ಇರುವವರೆಗೆ ನಮ್ಮ ಕರ್ತವ್ಯವನ್ನು ಬಿಡಬಾರದು. ನಮ್ಮ ಹಿರಿಯರಿಗೆ ಸಲ್ಲಿಸುತ್ತಿರುವ

ಗೌರವ, ಶ್ರದ್ಧಾ ಭಕ್ತಿ ಕಡಿಮೆ ಮಾಡಬಾರದು. ಅದರಂತೆ ಮೇಲೆ ತಿಳಿಸಿದ ಕ್ಷೇತ್ರಗಳಲ್ಲಿ ಶ್ರಾದ್ಧ ಮಾಡಿದರೆ ಮತ್ತೆ ಮಾಡಬಾರದು ಎಂದು ಯಾವ ಗ್ರಂಥದಲ್ಲಿಯೂ ಇರುವುದಿಲ್ಲ. ಬದಲಾಗಿ ಮಾಡಬೇಕೆಂದು ಕಾಲಮಾಧವಾದಿ ಗ್ರಂಥದಲ್ಲಿ ಹೇಳಿದೆ.

25. **ಒಂದು ವೇಳೆ ಶ್ರಾದ್ಧದ ದಿನ ಹೆಂಡತಿಯ ರಜೋದರ್ಶನವಾದಲ್ಲಿ (ಪೀರಿಯಡ್) ಏನು ಮಾಡಬೇಕು?** ಶ್ರಾದ್ಧದಲ್ಲಿ 1) ವಿಶ್ವೇದೇವ, ವಿಷ್ಣು, ಪಿತೃಗಳ ಪೂಜೆ 2) ಬ್ರಾಹ್ಮಣ ಭೋಜನ 3) ಪಿಂಡ ಪ್ರಧಾನ ಇವು ಮುಖ್ಯವಾದವು. ಇದಕ್ಕೆ ಪಾಕ ತಯಾರಿಕೆ (ಅಡಿಗೆ) ಅತ್ಯಗತ್ಯ. ಇಲ್ಲವಾದರೆ ಶ್ರಾದ್ಧ ಮಾಡಲು ಆಗುವುದಿಲ್ಲ. ಆದ್ದರಿಂದ ಇಂತಹ ಸಮಯದಲ್ಲಿ ಅಮಾನ್ನ ಶ್ರಾದ್ಧ ಮಾಡಬೇಕು (ಅಂದರೆ ಸತ್ಪಾತ್ರರಾದ ಬ್ರಾಹ್ಮಣರಿಗೆ ಭೋಜನ ದ್ರವ್ಯವನ್ನು ಸಂಕಲ್ಪಿಸಿ ದಾನ ಮಾಡಬೇಕು). ಒಂದು ವೇಳೆ ಪಾಕ ತಯಾರಿಕೆಗೆ ಬೇರೆಯವರಿದ್ದರೆ ಪಿಂಡ ಶ್ರಾದ್ಧವನ್ನು ಮಾಡಬೇಕು. ಇದೂ ಶಖ್ಯವಾಗಿರದಿದ್ದಲ್ಲಿ ಆ ತಿಂಗಳ ಅಮವಾಸ್ಯೆ ಅಥವಾ ಕೃಷ್ಣ ಪಕ್ಷ ಏಕಾದಶಿಯ ದಿನ ಮಾಡಬೇಕು. ವಾರ್ಷಿಕ ಶ್ರಾದ್ಧವನ್ನು ಪಿಂಡಪ್ರಧಾನವಾಗಿಯೇ ಮಾಡಬೇಕು (ನಿರ್ಣಯ ಸಿಂಧು). ಪಿತೃಗಳ ಪ್ರೀತ್ಯರ್ಥವಾಗಿ ಮಾಡಲೇಬೇಕಾದುದು ಶ್ರಾದ್ಧ. ಒಂದು ವೇಳೆ ಶ್ರಾದ್ಧ ಅಥವಾ ಪಿತೃ ಕ್ರಿಯಾ ಸಂಸ್ಕಾರವನ್ನು ಸರಿಯಾಗಿ ಮಾಡದಿದ್ದರೆ, ಪಿತೃ ದೋಷ ಬರುತ್ತದೆ. ಈ ದೋಷ ಬಂದರೆ ನಾವು ಬದುಕಿನಲ್ಲಿ ಹೇಳಲಾರದಷ್ಟು ಕಷ್ಟವನ್ನು ಎದುರಿಸಬೇಕಾಗುತ್ತದೆ. ಸುಖ ಶಾಂತಿ ನಮ್ಮಿಂದ ದೂರವಾಗುತ್ತದೆ. ಸಕಾಲದಲ್ಲಿ ಯಾವ ಕಾರ್ಯವನ್ನು ಮಾಡಲಾಗುವುದಿಲ್ಲ. ಶಿಕ್ಷಣವೂ ಆಗುವುದಿಲ್ಲ. ವಿವಾಹ ವಿಷಯದಲ್ಲಿ ಅಡ್ಡಿಯಾಗುತ್ತದೆ. ಸಂತಾನ ಭಾಗ್ಯಕ್ಕೂ ಕಷ್ಟವಾಗುತ್ತದೆ. ಹೀಗೇ ಯಾವುದೇ ವಿಷಯದಲ್ಲಿ ಜಯ ಸಿಗುವುದಿಲ್ಲ. ಆದ್ದರಿಂದ ಪಿತೃ ಕಾರ್ಯವನ್ನು ತಪ್ಪದೇ ಮಾಡಲೇ ಬೇಕು. ಒಂದು ವೇಳೆ ಕುಟುಂಬದಲ್ಲಿ ಪಿತೃ ದೋಷವಿದೆ ಎಂದು ತಿಳಿದರೆ ಗಯಾ ಶ್ರಾದ್ಧವನ್ನು ಮಾಡಬೇಕು. ಇದರಿಂದ ಮೃತಪಟ್ಟ ಕುಟುಂಬದ ಎಲ್ಲರಿಗೂ ಮೋಕ್ಷ ಪ್ರಾಪ್ತಿಯಾಗುವುದು. ಪಿತೃ ದೋಷ ನಿವಾರಣೆಯಾಗುತ್ತದೆ. ಇಲ್ಲದಿದ್ದರೆ ಕೆಲವು

ಪ್ರಸಿದ್ಧ ಕ್ಷೇತ್ರಗಳಲ್ಲಿ ನಾರಾಯಣ ಬಲಿ ಮಾಡುತ್ತಾರೆ. ಇದರಿಂದ ಕೆಲವು ಮಟ್ಟಿನ ದೋಷ ನಿವಾರಣೆಯಾಗುತ್ತದೆ. ಅರ್ಧ ಆಯುಷ್ಯದಲ್ಲಿ ಮೃತರಾದವರಿಗೆ ಮೋಕ್ಷ ಪ್ರಾಪ್ತಿಯಾಗುವುದಿಲ್ಲ. ಆಗ ನಾರಾಯಣ ಬಲಿ ಮಾಡಬೇಕು. ಒಟ್ಟಿನಲ್ಲಿ ನಮ್ಮ ಸುಖ ಸಂತೋಷಕ್ಕೆ ಪಿತೃಗಳ ಆಶೀರ್ವಾದ ಮುಖ್ಯ. ಅದಕ್ಕಾಗಿ ಮಕ್ಕಳಾಗಿ ನಮ್ಮ ಕರ್ತವ್ಯವನ್ನು ಮಾಡಲೇಬೇಕು. ಶ್ರದ್ಧಾ-ಭಕ್ತಿ- ವಿಶ್ವಾಸ ಇಡಲೇಬೇಕು.

----- ****** -----

# 10 ಶ್ರಾದ್ಧ ಪರಿಚಯ

ಹುಟ್ಟು ಮತ್ತು ಸಾವುಗಳು ಮನುಷ್ಯನಿಗೆ ಯಾವಾಗಲೂ ನಿಗೂಢ ರಹಸ್ಯವಾಗಿಯೇ ಉಳಿದಿವೆ. ಹುಟ್ಟಿನ ವಿಷಯಕ್ಕೆ ಮನುಜನು ಸಂಭ್ರಮಿಸಿದರೆ, ಸಾವಿನ ವಿಷಯ ಬಂದಾಗ ಒಂದೋ ಅದಕ್ಕೆ ಹೆದರುತ್ತಾನೆ ಇಲ್ಲಾ ಅದರಿಂದ ದೂರವುಳಿಯ ಬಯಸುತ್ತಾನೆ. ಯಾರು ಸಾವನ್ನು ಜೀವನದ ಮತ್ತು ವ್ಯಕ್ತಿತ್ವದ ಅಂತ್ಯ ಎಂದು ಭಾವಿಸುತ್ತಾರೆಯೋ ಅವರಿಗೆ ಸಾವು ಭಯಾನಕವಾದ ಮತ್ತು ಜೀವವನ್ನು ಬಲಿ ತೆಗೆದುಕೊಳ್ಳುವ ಕ್ರಿಯೆಯಾಗಿ ಗೋಚರಿಸುತ್ತದೆ. ದೇವರನ್ನೇ ಸರ್ವಸ್ವವೆಂದುಕೊಂಡವರು ಸಾವನ್ನು ನೋಡುತ್ತಲೇ ಏಕಾಏಕಿ ಭಗವಂತನೆಂಬುದೆಲ್ಲಾ ಸುಳ್ಳು, ಅವನಿದ್ದರೆ ಹೀಗೇಕೆ ಮಾಡುತ್ತಿದ್ದ ಎಂದು ವಾದಿಸುವ ನಿರೀಶ್ವರವಾದಿಗಳಾಗುತ್ತಾರೆ. ಆದರೆ ಯಾರು ಭಗವಂತನಲ್ಲಿ ನಿಜವಾದ ನಂಬಿಕೆಯನ್ನಿರುಸುತ್ತಾರೋ ಅವರು ಭಗವಂತನು ನಮ್ಮ ಜೀವಿತಕಾಲದಲ್ಲಿ ನಮ್ಮೊಂದಿಗಿರುವುದಲ್ಲದೆ ನಾವು ಮರಣ ಹೊಂದಿದ ನಂತರವೂ ಅವನು ನಮ್ಮ ಜೊತೆಗಿರುತ್ತಾನೆ ಎಂದು ವಿಶ್ವಸಿಸುತ್ತಾರೆ.

ಹಿಂದೂಗಳು ಮರಣವನ್ನು ಒಂದು ಜನ್ಮದ ನಂತರ ಮತ್ತೊಂದು ಜನ್ಮದ ಮಧ್ಯದಲ್ಲಿ ಬರುವ ದೇಹಾಂತರದ ಒಂದು ಸ್ಥಿತಿ ಎಂದು ಭಾವಿಸುತ್ತಾರೆ. ಆದ್ದರಿಂದ ಹಿಂದೂಗಳ ಪ್ರಕಾರ ಶರೀರವನ್ನು ಬಿಟ್ಟು ಹೊರಟ ಆತ್ಮಕ್ಕೆ ರಕ್ಷಣೆ ಮತ್ತು

ಸಹಾಯದ ಅವಶ್ಯಕತೆಯುಂಟಾಗಿ ಅದು ತನ್ನ ವಂಶಜರಿಂದ ಅದನ್ನು ನಿರೀಕ್ಷಿಸುತ್ತದೆ. ಈ ಸಹಾಯವು ಭೌತಿಕ ಶರೀರವನ್ನು ತ್ಯಜಿಸಿ ಮರಣಿಸಿದ ನಂತರ ಮತ್ತು ಅದು ಇತರೇ ಲೋಕಗಳಲ್ಲಿ ಪಯಣಿಸಬೇಕಾದ ಕಾಲಕ್ಕೂ ಬೇಕಾಗುತ್ತದೆ. ಈ ಹಂತದಲ್ಲಿಯೇ ವಿವಿಧ ರೀತಿಯ ಆಚರಣೆಗಳ ಅವಶ್ಯಕತೆಯುಂಟಾಗುತ್ತದೆ; ಇವು ವ್ಯಕ್ತಿಯು ಮರಣಿಸಿದ ಕೂಡಲೇ ಆಚರಿಸುವ ವಿಧಿಗಳು, ತದನಂತರ ತಿಂಗಳಿಗೊಂದಾವರ್ತಿ ಆಚರಿಸುವ ಮತ್ತು ವರ್ಷಕ್ಕೊಂದಾವರ್ತಿ ಆಚರಿಸುವ ವಿಧಿಗಳನ್ನೂ ಸಹ ಒಳಗೊಂಡಿವೆ. ಈ ಎಲ್ಲಾ ವಿಧಿಗಳನ್ನು 'ಶ್ರಾದ್ಧ' ಎನ್ನುವ ಸಾಮಾನ್ಯ ಹೆಸರಿನಿಂದ ಕರೆಯಲಾಗುತ್ತದೆ.

ಮರಣದ ನಂತರ ಪೂರ್ವಿಕರನ್ನು 'ಅಂತ್ಯೇಷ್ಠಿ' ಮತ್ತು 'ಶ್ರಾದ್ಧ'ಗಳ ಮೂಲಕ ಆರಾಧಿಸುವುದು ಬಹಳ ಹಿಂದಿನ ಕಾಲದಿಂದಲೂ ಅನೂಚಾನವಾಗಿ ನಡೆದುಕೊಂಡು ಬಂದಿರುವಂತೆ ಕಾಣುತ್ತದೆ. ಋಗ್ವೇದದ ಹಲವು ಪಂಕ್ತಿಗಳಲ್ಲಿ ಪಿತೃಗಳ ಉಲ್ಲೇಖವು ಬರುತ್ತದೆ. ಪಿತೃಗಳನ್ನು ಕೆಲವೊಂದು ಕಡೆ 'ಸಪ್ತ ಋಷಯಃ' ಅಂದರೆ ಸಪ್ತ ಋಷಿಗಳಾದ ನವಗ್ವರು* ಅಥವಾ ದಶಗ್ವರೊಂದಿಗೆ ಗುರಿತಿಸಲಾಗಿದ್ದರೆ. ಕೆಲವೊಂದು ಕಡೆ ಅವರನ್ನು ಹಲವಾರು ಗುಂಪುಗಳಲ್ಲಿ ವಿಭಜಿಸಲಾಗಿದೆ. ಉದಾಹರಣೆಗೆ, ಪಿತರಃ ಸೋಮವಂತಃ (ಸೋಮಯಾಗವನ್ನು ಕೈಗೊಂಡವರು) ಅಥವಾ ಪಿತರಃ ಬರ್ಹಿಷಡಃ (ಪಾಕಯಜ್ಞ ಅಥವಾ ಬೇಯಿಸಿದ ಆಹಾರದ ಮೂಲಕ ಯಜ್ಞ ಮಾಡಿದವರು). ಕೆಲವೊಮ್ಮೆ ಇವರುಗಳು ತಮ್ಮದೇ ಆದ ಬೇರೆ ಲೋಕದಲ್ಲಿ - ಪಿತೃ ಲೋಕದಲ್ಲಿ ನಿವಾಸಿಸುತ್ತಾರೆ ಎಂದೂ ವಿವರಿಸಲಾಗಿದೆ. ಪಿಂಡಪಿತೃಯಜ್ಞ ಮತ್ತು ಮಹಾಪಿತೃಯಜ್ಞಗಳನ್ನು 'ಆಹಿತಾಗ್ನಿ'ಗಳು (ಪವಿತ್ರವಾದ ವೈದಿಕ ಅಗ್ನಿಗಳನ್ನು ಯಾರು ವಿಧಿವತ್ತಾಗಿ ಪ್ರತಿಷ್ಠಾಪಿಸಿರುತ್ತಾರೋ ಅವರು) ಕಡ್ಡಾಯವಾಗಿ ಮಾಡಲೇ ಬೇಕೆಂದು ವಿಧಿಸಲಾಗಿದೆ. ಈ ವಿಧವಾದ ಆಚರಣೆಗಳು ಮುಂದೆ ಆರಂಭವಾದ ಶ್ರಾದ್ಧವಿಧಿಗೆ ಬುನಾದಿಯಾಗಿಬಹುದು.

* ಸತ್ರಯಾಗಗಳನ್ನು ಕೈಗೊಂಡ ಋಷಿಗಳು ಒಂಬತ್ತು ದಿನಗಳಲ್ಲಿ ಫಲಗಳನ್ನು ಪಡೆದುಕೊಂಡಿದ್ದರೆ ಅವರನ್ನು ನವಗ್ವರೆಂದೂ ಮತ್ತು ಅದೇ ಯಜ್ಞಗಳಿಗೆ

ಫಲಗಳನ್ನು ಹತ್ತು ದಿನಗಳಲ್ಲಿ ಪಡೆದಿದ್ದರೆ ಅವರನ್ನು ದಶಗ್ವರೆಂದೂ ಕರೆಯಲಾಗಿದೆ. ಇವರು ಸಪ್ತರ್ಷಿಗಳಲ್ಲಿ ಒಬ್ಬರಾಗಿರುವ ಋಷಿ ಅಂಗೀರಸನ ವಂಶಜರು. ಕೆಲವೊಮ್ಮೆ ಈ ನವಗ್ವ ಮತ್ತು ದಶಗ್ವರನ್ನೇ ಸಪ್ತರ್ಷಿಗಳೆಂದು ಕರೆಯಲಾಗಿದೆ.

## 10.1 ಪುನರ್ಜನ್ಮ ಹಾಗು ಕರ್ಮಸಿದ್ಧಾಂತಕ್ಕೆ ಪ್ರತಿಯಾಗಿ ಶ್ರಾದ್ಧ

ಹಿಂದೂಗಳು ಬಹುವಾಗಿ ನಂಬುವ ಮತ್ತು ಪ್ರಚಾರದಲ್ಲಿರುವ ಪುನರ್ಜನ್ಮ ಮತ್ತು ಕರ್ಮಸಿದ್ಧಾಂತದ ಪ್ರಕಾರ ಯಾರು ಭೂಲೋಕದಲ್ಲಿ ಮರಣ ಹೊಂದುತ್ತಾರೆಯೋ ಅವರು ಮತ್ತೆ ಹುಟ್ಟುತ್ತಾರೆ. ಅವರವರ ಕರ್ಮಕ್ಕನುಸಾರವಾಗಿ ಒಬ್ಬರ ಹುಟ್ಟು ಇದೇ ಲೋಕದಲ್ಲಿರಬಹುದು ಅಥವಾ ಇತರೇ ಲೋಕಗಳಲ್ಲಿರಬಹುದು. ಆಧ್ಯಾತ್ಮಿಕ ಜ್ಞಾನವನ್ನು ಪಡೆದು ಅಂತಿಮವಾಗಿ ಒಬ್ಬರು ಜನನ-ಮರಣಗಳ ಚಕ್ರದಿಂದ ಬಿಡುಗಡೆ ಹೊಂದುವವರೆಗೆ ಅಥವಾ ಮೋಕ್ಷವನ್ನು ಪಡೆಯುವವರೆಗೆ ಈ ವಿಧವಾದ ಹುಟ್ಟು ಸಾವುಗಳು ಸಂಭವಿಸುತ್ತಲೇ ಇರುತ್ತವೆ. ನಾವು ಯಾವ ಪೂರ್ವಜರನ್ನು ಉದ್ದೇಶಿಸಿ ಶ್ರಾದ್ಧದ ವಿಧಿಗಳನ್ನು ಕೈಗೊಂಡು ಆ ವ್ಯಕ್ತಿಗೆ ಪಿಂಡ ಅಥವಾ ಅನ್ನದ ಉಂಡೆಗಳನ್ನು ಅರ್ಪಿಸುತ್ತೆವೆಯೋ ಅದರ ಸಾರವು ಅವರಿಗೆ ತಲುಪುತ್ತದೆನ್ನುವ ನಂಬಿಕೆಯೇನು? ಎನ್ನುವ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಈ ಪ್ರಶ್ನೆಯನ್ನು ಸ್ಮೃತಿ ಹಾಗು ಶ್ರುತಿಗಳಲ್ಲಿ ಹಲವಾರು ಬಾರಿ ಎತ್ತಲಾಗಿದ್ದು ಆ ವಿಷಯದ ಕುರಿತ ಚರ್ಚೆಯೂ ವಿಪುಲವಾಗಿ ನಡೆದಿದೆ. ಆದರೆ ಎಲ್ಲ ಕೃತಿಗಳಲ್ಲೂ ಇದಕ್ಕೆ ನಮಗೆ ಸಿಗುವ ಪ್ರಧಾನವಾದ ಉತ್ತರವು ಇಂತಹ ವಿಷಯಗಳು ಇಂದ್ರಿಯಗ್ರಾಹ್ಯವಲ್ಲದ್ದರಿಂದ ಅವುಗಳಲ್ಲಿ ನಾವು ನಂಬಿಕೆಯನ್ನಿರಿಸಬೇಕು ಮತ್ತು ವೇದೋಪನಿಷತ್ತುಗಳು ಹೇಳಿರುವ ಆದೇಶಗಳನ್ನು ನಾವು ಪಾಲಿಸಬೇಕಷ್ಟೆ. ವೇದೋಪನಿಷತ್ತುಗಳ ಪ್ರಕಾರ, ಪಿತೃಗಳನ್ನು ಕಾಪಾಡುವ ವಿಶೇಷ ವರ್ಗಕ್ಕೆ ಸೇರಿದ ದೇವತೆಗಳಾದ - ವಸುಗಳು, ರುದ್ರರು ಮತ್ತು ಆದಿತ್ಯರೆನ್ನುವವರು ನಾವು ಅರ್ಪಿಸುವ ಪಿಂಡಗಳನ್ನು ಸ್ವೀಕರಿಸಿ ಅದರ ಸಾರವನ್ನು ಪಿತೃಗಳಿಗೆ ವರ್ಗಾಯಿಸುತ್ತಾರೆ. ಪಿತೃಗಳು ತಮ್ಮ ಯೋಗ್ಯತೆಗೆ ಅನುಸಾರವಾಗಿ ಸ್ವರ್ಗ ಅಥವಾ ನರಕಗಳಲ್ಲಿ

ಯಾವುದಾದರೊಂದು ಲೋಕದಲ್ಲಿರಬಹದು ಮತ್ತು ಅವರು ಮಾನವ ಅಥವಾ ಉಪಮಾನವರ ರೂಪದಲ್ಲಿದ್ದರೂ ಸಹ ಅವರಿಗೆ ಪಿಂಡ ಸಾರವನ್ನು ಪಿತೃದೇವತೆಗಳಾದ ವಸುಗಳು, ರುದ್ರರು ಮತ್ತು ಆದಿತ್ಯರು ತಲುಪಿಸುತ್ತಾರೆ. ಯಾರ ವಂಶಜರು ಶ್ರಾದ್ಧಾದಿ ಕರ್ಮಗಳನ್ನು ಆಚರಿಸುವುದರ ಮೂಲಕ ತಮ್ಮ ಪಿತೃಗಳನ್ನು ಸಂತೃಪ್ತಿ ಪಡಿಸುತ್ತಾರೋ ಅವರಿಗೆ ಸೂಕ್ತವಾದ ವರಗಳನ್ನು ಪಿತೃಗಳು ದಯಪಾಲಿಸುತ್ತಾರೆ.

## 10.2 ಶ್ರಾದ್ಧ ಕರ್ಮಗಳ ಕುರಿತ ಸಾಹಿತ್ಯ

ಶ್ರಾದ್ಧ ಕರ್ಮಗಳ ಕುರಿತ ಸಾಹಿತ್ಯವು ಬಹಳ ವಿಪುಲವಾಗಿದೆ. ಅನಾದಿಕಾಲದಿಂದಲೂ ಪ್ರಚಲಿತದಲ್ಲಿರುವ ವೈದಿಕ ಸಂಹಿತೆಗಳನ್ನು ಹೊರತುಪಡಿಸಿ, ಶ್ರಾದ್ಧವು ಪುರಾತನ ಸ್ಮೃತಿಗಳಾದ ಮನು ಮತ್ತು ಯಾಜ್ಞವಲ್ಕ್ಯರ ಸ್ಮೃತಿಗಳಲ್ಲಿ ಹಾಗು ಆಪಸ್ತಂಭ ಮತ್ತು ಅಶ್ವಲಾಯನ ಗೃಹ್ಯಸೂತ್ರಗಳಲ್ಲಿ ಜಾಗ ಪಡೆದಿದೆ. ಬೌಧಾಯನ ಧರ್ಮಸೂತ್ರಗಳು ಸಹ ಶ್ರಾದ್ಧದ ಕುರಿತಾಗಿ ಚರ್ಚಿಸುತ್ತವೆ.

ಕೆಲವೊಂದು ಪುರಾಣಗಳೂ ಸಹ ಸಾಕಷ್ಟು ವ್ಯಾಪಕವಾಗಿಯೇ ಶ್ರಾದ್ಧದ ಕುರಿತು ಚರ್ಚಿಸುತ್ತವೆ. ಆ ಪುರಾಣಗಳೆಂದರೆ, ಅಗ್ನಿಪುರಾಣ, ಬ್ರಹ್ಮಪುರಾಣ, ಗರುಡಪುರಾಣ, ಕೂರ್ಮಪುರಾಣ, ಮಾರ್ಕಂಡೇಯಪುರಾಣ, ಮತ್ಸ್ಯಪುರಾಣ, ವಿಷ್ಣುಧರ್ಮೋತ್ತರ-ಪುರಾಣ ಮತ್ತು ವಿಷ್ಣು ಪುರಾಣ.

## 10.3 ಶ್ರಾದ್ಧ ಪದದ ಅರ್ಥ

'ಶ್ರಾದ್ಧ' ಶಬ್ದವು 'ಶ್ರದ್ಧಾ' ಅಥವಾ ನಂಬಿಕೆ ಎನ್ನುವ ಮೂಲ ಪದದಿಂದ ವ್ಯುತ್ಪನ್ನವಾಗಿದೆ. ಆದ್ದರಿಂದ ಯಾವುದು ಶ್ರದ್ಧೆಯಿಂದ ಅರ್ಪಿಸಲ್ಪಡುವುದೋ ಅದು ಶ್ರಾದ್ಧವಾಗುತ್ತದೆ. ಆದರೆ ಪಾರಿಭಾಷಿಕವಾಗಿ ಈ ಶಬ್ದದ ಬಳಕೆಯು ಮರಣದ ನಂತರ ಕೈಗೊಳ್ಳುವ ಮತ್ತು ತದನಂತರ ಆಚರಿಸುವ ಧಾರ್ಮಿಕ ಕಾರ್ಯಗಳಿಗೆ ಪರಿಮಿತವಾಗಿದೆ. ಶ್ರಾದ್ಧ ಶಬ್ದದ ವಿವಿಧ ವ್ಯಾಖ್ಯಾನಗಳನ್ನು ಕ್ರೋಢೀಕರಿಸಿ ಅದರ ಸಾರಾಂಶವನ್ನು ಒಟ್ಟಾರೆಯಾಗಿ ಈ ಕೆಳಕಂಡಂತೆ ವಿವರಿಸಬಹುದು.

1. ಇದನ್ನು ಸತ್ತ ವ್ಯಕ್ತಿಯ ಅರ್ಹನಾದ ವಂಶಿಕನು ಶ್ರದ್ಧೆಯಿಂದ ಕೈಗೊಳ್ಳುತ್ತಾನೆ.
2. ಇದನ್ನು ಮೂರು ತಲೆಮಾರಿನ ಪಿತೃಗಳ ಒಳಿತಿಗಾಗಿ ಕೈಗೊಳ್ಳಲಾಗುತ್ತದೆ. ಅವೆಂದರೆ ತಂದೆ, ತಾತ ಮತ್ತು ಮುತ್ತಾತ. ಹಾಗೂ ತಾಯಿ, ಅಜ್ಜಿ, ಮುತ್ತಜ್ಜಿ
3. ಅದನ್ನು ಶಾಸ್ತ್ರಬದ್ಧವಾಗಿ ಮತ್ತು ವಂಶಾಚಾರದಂತೆ ಸೂಕ್ತವಾದ ಸಮಯ ಮತ್ತು ಸ್ಥಳಗಳಲ್ಲಿ ಆಚರಿಸಬೇಕು.
4. ಇದರೊಂದಿಗೆ ಸಿದ್ಧಪಡಿಸಿದ ಆಹಾರ ಅಥವಾ ಆಹಾರ ಸಾಮಗ್ರಿಗಳನ್ನು ಅಥವಾ ಧನ-ಕನಕಗಳನ್ನು ಯೋಗ್ಯನಾದ ಬ್ರಾಹ್ಮಣರಿಗೆ ಕೊಡಬಹುದು.

ಋಗ್ವೇದದ ಪ್ರಕಾರ ಅದರ ಅನುಯಾಯಿಗಳು ಯೋಗ್ಯರಾದ ಬ್ರಾಹ್ಮಣರಿಗೆ ಆಹಾರ ಸಾಮಗ್ರಿಗಳನ್ನು ಅಥವಾ ದನಕನಕಾದಿಗಳನ್ನು ಕೊಟ್ಟು ಸತ್ಕರಿಸಿದರೆ ಶ್ರಾದ್ಧವನ್ನು ಆಚರಿಸಿದಂತಾಗುತ್ತದೆ. ಯರ್ಜುವೇದದ ಅನುಯಾಯಿಗಳು ಪಿತೃಗಳಿಗೆ ಕೇವಲ ಪಿಂಡಪ್ರಧಾನ ಮಾಡಿದರೆ ಸಾಕು ಶ್ರಾದ್ಧವು ಪೂರ್ಣಗೊಂಡಂತೆ. ಆದರೆ ಸಾಮವೇದದ ಅನುಯಾಯಿಗಳು ಯೋಗ್ಯ ಬ್ರಾಹ್ಮಣರನ್ನು ಸತ್ಕರಿಸುವುದರೊಂದಿಗೆ ಪಿಂಡಪ್ರಧಾನವನ್ನೂ ಮಾಡಬೇಕೆನ್ನುವುದು ಅದರ ಆಶಯ.

## 10.4 ಶ್ರಾದ್ಧ ಕರ್ತಾ (ಶ್ರಾದ್ಧವನ್ನು ಕೈಗೊಳ್ಳುವವನು)

ಒಬ್ಬ ವ್ಯಕ್ತಿಯು ಮರಣಿಸಿದಾಗ ಅವನ ಅಂತ್ಯೇಷ್ಠಿ (ಅಂತಿಮ ಕರ್ಮಗಳನ್ನು) ಮತ್ತು ಶ್ರಾದ್ಧವನ್ನು ಅವನ ಹಿರಿಯ ಮಗ ಮಾಡಬೇಕು. (ಧರ್ಮಶಾಸ್ತ್ರಗಳು ಶೂದ್ರರೂ ಸಹ ಶ್ರಾದ್ಧಾದಿ ಕರ್ಮಗಳನ್ನು ಆಚರಿಸಬಹುದು ಆದರೆ ಅದನ್ನವರು ಯೋಗ್ಯ ಬ್ರಾಹ್ಮಣನ ಮೂಲಕವಷ್ಟೇ ಮಾಡಿಸಬಹುದು ಎಂದು ಹೇಳುತ್ತವೆ). ಮೃತನಿಗೆ ಒಂದಕ್ಕಿಂತ ಹೆಚ್ಚು ಗಂಡುಮಕ್ಕಳಿದ್ದು ಅವರೆಲ್ಲರೂ ಜೀವಂತವಾಗಿದ್ದು ಪ್ರತ್ಯೇಕವಾಗಿದ್ದಾಗ ಪ್ರತಿಯೊಬ್ಬರಿಗೂ ಸಹ ಶ್ರಾದ್ಧವನ್ನು ಮಾಡುವ ಅರ್ಹತೆಯಿರುತ್ತದೆ ಮತ್ತು ಅದನ್ನವರು ಕಡ್ಡಾಯವಾಗಿ ಮಾಡಬೇಕೆಂದೂ ಹೇಳಿದೆ.

ಒಂದು ವೇಳೆ ಮೃತನಿಗೆ ಗಂಡು ಸಂತಾನವಿಲ್ಲದಿದ್ದರೆ, ಅವನ ಸಮೀಪ ಬಂಧುಗಳು (ಪುರುಷ) ಉದಾಹರಣೆಗೆ ಸಹೋದರ, ದತ್ತುಪುತ್ರ, ಅಳಿಯ ಅಥವಾ ಮೊಮ್ಮಗ ಸಹ ಅವನ ಶ್ರಾದ್ಧವನ್ನು ಮಾಡಬಹುದು.

ಒಂದು ವೇಳೆ ಮೃತನ ಮಗನು ತುಂಬಾ ಚಿಕ್ಕವನಾಗಿದ್ದು ಅವನಿಗೆ ಉಪನಯನವಾಗಿಲ್ಲದಿದ್ದರೆ, ಮೃತನ ಹೆಂಡತಿಯು ಪುರೋಹಿತರ ಮೂಲಕ ಶ್ರಾದ್ಧವನ್ನು ಮಾಡಿಸಬಹುದು.

## 10.5 ಯಾರಿಗೆ ಶ್ರಾದ್ಧವು ಮಾಡಲ್ಪಡಬೇಕು?

ಸಾಮಾನ್ಯವಾಗಿ ಪ್ರಚಲಿತವಿರುವ ನಿಯಮದಂತೆ ಶ್ರಾದ್ಧವನ್ನು ಮರಣ ಹೊಂದಿದ ತಂದೆ(ಪಿತ), ತಂದೆಯ-ತಂದೆ ಅಥವಾ ತಾತ (ಪಿತಾಮಹ) ಮತ್ತು ತಂದೆಯ-ತಂದೆಯ-ತಂದೆ ಅಥವಾ ಮುತ್ತಾತ (ಪ್ರಪಿತಾಮಹ) ಹಾಗೂ ತಾಯಿ (ಮಾತೃ), ಅಜ್ಜಿ (ಪಿತಾಮಹಿ), ಮುತ್ತಜ್ಜಿ (ಪ್ರಪಿತಾಮಹಿ) ಇವರ ಒಳಿತಿಗಾಗಿ ಮಾಡಬೇಕು. ಬೇರೆಯವರಿಗೂ ಸಹ ಶ್ರಾದ್ಧವನ್ನು ಮಾಡಬಹುದು ಒಂದು ವೇಳೆ ಮೃತರು ಸಮೀಪ ಬಂಧುಗಳಾಗಿದ್ದರೆ ಅಥವಾ ಪುರುಷ ಸಂತಾನವಿಲ್ಲದವರಾಗಿದ್ದರೆ. ಸ್ತ್ರೀಯರು ಮರಣ ಹೊಂದಿದಾಗ ಆಕೆಯ ಶ್ರಾದ್ಧವನ್ನು ಆಕೆಯ ಹಿರಿಮಗ ಮಾಡಬಹುದು. ಒಂದು ವೇಳೆ ಆಕೆಗೆ ಪುರಷ ಸಂತಾನವಿಲ್ಲದಿದ್ದರೆ ಆಕೆಯ ಮೊಮ್ಮಗನು ಶ್ರಾದ್ಧ ಕಾರ್ಯವನ್ನು ಮಾಡಬಹುದು. ಮೊಮ್ಮಗನೂ ಇಲ್ಲದಿದ್ದರೆ ಆಕೆಯ ಮಗಳು ಬ್ರಾಹ್ಮಣ ಪುರೋಹಿತರ ಮೂಲಕ ಶ್ರಾದ್ಧವನ್ನು ಮಾಡಿಸಬಹುದು.

ಅವಿವಾಹಿತ ಸ್ತ್ರೀಯು ಮೃತಪಟ್ಟಲ್ಲಿ, ಆಕೆಯ ಶ್ರಾದ್ಧವನ್ನು ಆಕೆಯ ತಂದೆ ಅಥವಾ ಆಕೆಯ ಹಿರಿಯಣ್ಣ ಅಥವಾ ಹತ್ತಿರದ ಪುರುಷ ಸಂಬಂಧಿಯು ಮಾಡಬಹುದು.

ಅಸಹಜ ಮರಣವಾದಾಗ ಉದಾಹರಣೆಗೆ ಆತ್ಮಹತ್ಯೆ ಅಥವಾ ಅಪಘಾತದಲ್ಲಿ ವ್ಯಕ್ತಿಯು ಮೃತಪಟ್ಟಿದ್ದರೆ ಮೊದಲು ನಾರಾಯಣ ಬಲಿಯನ್ನು ಕೈಗೊಳ್ಳಬೇಕು. ಇದಾದ ಒಂದು ವರ್ಷದ ನಂತರ ಶ್ರಾದ್ಧ ಕರ್ಮವನ್ನು ಮಾಡಬಹುದು.

ಸಂನ್ಯಾಸಿಗಳಿಗೆ ಯಾವುದೇ ವಿಧವಾದ ಶ್ರಾದ್ಧವನ್ನು ಮಾಡುವುದಿಲ್ಲ, ಏಕೆಂದರೆ ಅವರು ಸಂನ್ಯಾಸವನ್ನು ಸ್ವೀಕರಿಸುವಾಗ ತಮ್ಮ ಶ್ರಾದ್ಧ ಕರ್ಮವನ್ನು ಸ್ವತಃ ತಾವೇ ಆಚರಿಸಿಕೊಂಡಿರುತ್ತಾರೆ.

## 10.6 ಶ್ರಾದ್ಧವನ್ನು ಮಾಡಲು ಸೂಕ್ತ ಸಮಯ ಮತ್ತು ಸ್ಥಳ

ಸಾಮಾನ್ಯವಾಗಿ ಶ್ರಾದ್ಧವನ್ನು ಚಾಂದ್ರಮಾನ ಪದ್ಧತಿಯಂತೆ ಮೃತನು ಮರಣಿಸಿದ ತಿಥಿಯಂದು ಮಾಡಲಾಗುತ್ತದೆ. ಉದಾಹರಣೆಗೆ, ಮೃತನು ಮಾಘಮಾಸ ಶುಕ್ಲಪಕ್ಷ ಅಷ್ಟಮಿತಿಥಿ ಯಂದು (ಜನವರಿ-ಫೆಬ್ರವರಿ ತಿಂಗಳಲ್ಲಿ ಬರುವ ಮಾಘಮಾಸದ ಶುದ್ಧ ಅಷ್ಟಮಿ ಅಥವಾ ಎಂಟನೆಯ ದಿನದಂದು) ಮೃತಪಟ್ಟಿದ್ದರೆ ಪ್ರತಿ ವರ್ಷ ಅದೇ ಮಾಸ ಪಕ್ಷದ ತಿಥಿಯಂದು ಅವನ ಶ್ರಾದ್ಧವನ್ನು ಕೈಗೊಳ್ಳಬೇಕು.

ಆಹಿತಾಗ್ನಿಗಳು (ವಿಧಿಬದ್ಧವಾಗಿ ಪವಿತ್ರವಾದ ವೈದಿಕ ಅಗ್ನಿಗಳನ್ನು ನಿರ್ವಹಿಸುವವರು) ಕೇವಲ ಅಮವಾಸ್ಯೆಯ ದಿನದಂದು ಮಾತ್ರವೇ ಶ್ರಾದ್ಧವನ್ನು ಮಾಡಬೇಕೆಂದು ಹೇಳಲಾಗಿದೆ.

ಆಸಕ್ತಿಕರ ವಿಷಯವೇನೆಂದರೆ ಮೊದಲ ಮೂರು ವರ್ಣಗಳಿಗೆ ಸೇರಿದ ಪ್ರತಿ ಗೃಹಸ್ಥನೂ ಸಹ ಪ್ರತಿದಿನವೂ ಪಂಚಮಹಾಯಜ್ಞಗಳನ್ನು ಕಡ್ಡಾಯವಾಗಿ ಮಾಡಲೇಬೇಕಾಗಿತ್ತು ಮತ್ತು ಅವುಗಳಲ್ಲೊಂದಾದ ಪಿತೃಯಜ್ಞ ಅಥವಾ ಪೂರ್ವಿಕರಿಗೆ ಆಹಾರ ಅಥವಾ ತರ್ಪಣ ಅಥವಾ ಹಾಲು ಅಥವಾ ಹಣ್ಣುಗಳ ಅರ್ಪಣೆ ಮಾಡುವುದು ಅದರ ಅವಿಭಾಜ್ಯ ಅಂಗವಾಗಿತ್ತು.

ಶ್ರಾದ್ಧಗಳನ್ನು ಕೆಲವೊಂದು ಮಂಗಳಕರ ಅಥವಾ ಶುಭದಿನಗಳಂದೂ ಸಹ ಮಾಡಬಹುದು. ಉದಾಹರಣೆಗೆ - ಅಮವಾಸ್ಯೆ, ಮಾರ್ಗಶಿರ (ನವೆಂಬರ್- ಡಿಸೆಂಬರ್), ಪೌಷ (ಡಿಸೆಂಬರ್ - ಜನವರಿ) ಮತ್ತು ಫಾಲ್ಗುಣ (ಜನವರಿ -ಫೆಬ್ರವರಿ) ಮಾಸಗಳ ಕೃಷ್ಣ ಪಕ್ಷದ ಅಷ್ಟಮಿ ತಿಥಿಗಳಲ್ಲಿ, ಅಥವಾ ಯಾವುದೇ ಮಾಸದ ಕೃಷ್ಣ ಪಕ್ಷದಲ್ಲಿ, ಎರಡು ಆಯನಗಳಲ್ಲಿ (ದಕ್ಷಿಣ ಮತ್ತು ಉತ್ತರ ಅವು ಕ್ರಮವಾಗಿ ಜೂನ್ ಮತ್ತು ಜನವರಿ ತಿಂಗಳಿನಲ್ಲಿ ಬರುತ್ತವೆ), ಸಂಕ್ರಾಂತಿಗಳಂದು (ಸೂರ್ಯನು ಒಂದು

ರಾಶಿಯಿಂದ ಇನ್ನೊಂದು ರಾಶಿಗೆ ಪ್ರವೇಶ ಮಾಡುವ ದಿನಗಳಂದು), ಮತ್ತು ಸಂತೋಷದ ಸಮಾರಂಭಗಳಲ್ಲಿ ಉದಾಹರಣೆಗೆ ಪುತ್ರನ ಜನನ ಕಾಲದಲ್ಲಿ ಮತ್ತು ಇತರೇ ಸಮಯಗಳಲ್ಲಿ ಅಂದರೆ ಗ್ರಹಣ ಕಾಲಗಳಲ್ಲಿ ಮತ್ತು ಶಾಸ್ತ್ರವಿಧಿತ ಇತರೇ ಶುಭದಿನಗಳಲ್ಲಿ.

ಚಾಂದ್ರಮಾನದ ಪ್ರಕಾರ ಕೆಲವೊಂದು ವಿಶೇಷವಾದ ಶುಭದಿನಗಳು - ಯುಗಾದಿ ಅಥವಾ ಮನ್ವಂತರಗಳಂದು ಶ್ರಾದ್ಧಕಾರ್ಯಗಳನ್ನು ಮಾಡುವುದು ಶ್ರೇಯಸ್ಕರವೆಂದು ಹೇಳಲಾಗಿದೆ.

ಮಾಸಿಕ ಶ್ರಾದ್ಧಗಳನ್ನು ಸಾಮಾನ್ಯವಾಗಿ ವ್ಯಕ್ತಿಯು ಮೃತಪಟ್ಟ ಮೊದಲನೇ ವರ್ಷದಲ್ಲಿ ಮಾತ್ರವೇ ಮಾಡಲಾಗುತ್ತದೆ.

ಇನ್ನು ಸೂಕ್ತ ಸ್ಥಳದ ಕುರಿತು ಹೇಳಬೇಕೆಂದರೆ, ಶ್ರಾದ್ಧವನ್ನು ಸ್ವಚ್ಛವಾಗಿರುವ ಸ್ಥಳಗಳಲ್ಲಿ ಅದರಲ್ಲೂ ದಕ್ಷಿಣದ ಕಡೆಗೆ ಇಳಿಜಾರು ಹೊಂದಿರುವ ಪ್ರದೇಶಗಳಲ್ಲಿ ಮಾಡುವುದು ಹೆಚ್ಚು ಸೂಕ್ತವೆಂದು ಪರಿಗಣಿಸಲಾಗಿದೆ. ಇನ್ನು ನಿರ್ಜನ ಪ್ರದೇಶಗಳಲ್ಲಿ ಮತ್ತು ಎಲ್ಲ ಕಡೆಯಿಂದಲೂ ಮರೆಯಾಗಿರುವ ಜಾಗಗಳು ಅತ್ಯಂತ ಪ್ರಶಸ್ತವೆಂದು ಹೇಳಲಾಗಿದೆ. ಆದರೆ, ಒಬ್ಬರ ಸ್ವಂತ ಮನೆಗಳಲ್ಲಿ ಶ್ರಾದ್ಧಗಳನ್ನು ಮಾಡುವುದು ಸಾಮಾನ್ಯವಾಗಿದೆ ಮತ್ತು ಇದು ಹೆಚ್ಚು ಅನುಕೂಲಕರವೂ ಹೌದು.

ಶ್ರಾದ್ಧಗಳನ್ನು ಪವಿತ್ರ ಕ್ಷೇತ್ರಗಳಲ್ಲಿ ಮತ್ತು ಪುಣ್ಯ ಸ್ಥಳಗಳ್ಲಿ ಕೈಗೊಳ್ಳುವುದನ್ನು ಅತ್ಯಂತ ಫಲದಾಯಕವೆಂದು ಶಾಸ್ತ್ರಗಳು ಸಾರುತ್ತವೆ. ಈ ಕೆಳಗಿನ ಸ್ಥಳಗಳನ್ನು ಬಹುವಾಗಿ ಉಲ್ಲೇಖಿಸಲಾಗಿದೆಯಲ್ಲದೇ ಆ ಸ್ಥಳಗಳಲ್ಲಿ ಶ್ರಾದ್ಧಕರ್ಮಗಳನ್ನು ಮಾಡುವುದು ಅತ್ಯಂತ ಪುಣ್ಯಪ್ರದವೆಂದೂ ಸಹ ಒಕ್ಕಣಿಸಲಾಗಿದೆ. ಗಯಾ ಕ್ಷೇತ್ರ (ಬಿಹಾರ ರಾಜ್ಯ), ಪ್ರಭಾಸ ಕ್ಷೇತ್ರ (ಗುಜರಾತ್), ಪುಷ್ಕರ (ರಾಜಸ್ಥಾನ), ಪ್ರಯಾಗ (ಉತ್ತರ ಪ್ರದೇಶ), ವಾರಣಾಸಿ (ಬನಾರಸ್ ಅಥವಾ ಕಾಶಿ) ಮತ್ತು ಕುರುಕ್ಷೇತ್ರ (ಹರಿಯಾಣ). ಅಮರಕಂಟಕ (ಮಧ್ಯಪ್ರದೇಶ); ಗಂಗೆ, ಯಮುನೆ ಮತ್ತು ನರ್ಮದಾ ನದಿಯ ತಟಗಳು.

ಮ್ಲೇಚ್ಛ ದೇಶಗಳಲ್ಲಿ ಅಂದರೆ ಎಲ್ಲಿ ಜನರು ವರ್ಣಾಶ್ರಮ ಧರ್ಮಗಳನ್ನು ಪಾಲಿಸುವುದಿಲ್ಲವೋ ಅಲ್ಲಿ ಶ್ರಾದ್ಧ ಕರ್ಮಗಳನ್ನು ಕೈಗೊಳ್ಳಬಾರದು.

## 10.7 ಶ್ರಾದ್ಧಗಳ ವರ್ಗೀಕರಣ

ಶ್ರಾದ್ಧಗಳನ್ನು ಹಲವು ವಿಧವಾಗಿ ವರ್ಗೀಕರಿಸಿಲಾಗಿದೆ – ರೋಧನ ಶ್ರಾದ್ಧ

1. ನಿತ್ಯ, ನೈಮಿತ್ತಿಕ, ಕಾಮ್ಯ
2. ಏಕೋದ್ದಿಷ್ಟ ಮತ್ತು ಪಾರ್ವಣ
3. ಅಹರಹಶ್ರಾದ್ಧ, ಪಾರ್ವಣಶ್ರಾದ್ಧ, ವೃದ್ಧಿಶ್ರಾದ್ಧ, ಏಕೋದ್ದಿಷ್ಟ ಶ್ರಾದ್ಧ ಮತ್ತು ಸಪಿಂಡೀಕರಣ

ನಿತ್ಯ ಶ್ರಾದ್ಧಗಳನ್ನು ನಿಗದಿತ ಸಂದರ್ಭಗಳಲ್ಲಿ ತಪ್ಪದೇ ಮಾಡಬೇಕು. ಉದಾಹರಣೆಗೆ ಪ್ರತಿದಿನ, ಅಮಾವಾಸ್ಯೆಯ ದಿನ ಅಥವಾ ಅಷ್ಟಮಿಗಳಂದು ಕೈಗೊಳ್ಳುವ ಶ್ರಾದ್ಧಗಳು.

ನೈಮಿತ್ತಿಕ ಶ್ರಾದ್ಧಗಳನ್ನು ವಿಶೇಷ ಕಾರಣ ಅಥವಾ ನಿಮಿತ್ತಕ್ಕಾಗಿ ಮಾಡಬೇಕು, ಉದಾಹರಣೆಗೆ ಪುತ್ರನ ಜನನ.

ಕಾಮ್ಯಶ್ರಾದ್ಧಗಳನ್ನು ಕೆಲವೊಂದು ಆಸೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಕೈಗೊಳ್ಳಬೇಕು.

ಕೆಲವೊಂದು ಶಾಸ್ತ್ರಕಾರರು ಈಗಿರುವ ಶ್ರಾದ್ಧಗಳೊಂದಿಗೆ ಮತ್ತೊಂದಷ್ಟನ್ನು ಸೇರಿಸಿ ಅವುಗಳ ಸಂಖ್ಯೆಗಳನ್ನು ಹನ್ನೆರಡಕ್ಕೆ ಏರಿಸಿರುತ್ತಾರೆ. ಉದಾಹರಣೆಗೆ, ಗೋಷ್ಠಿಶ್ರಾದ್ಧ, ಶುದ್ಧಿಶ್ರಾದ್ಧ, ಯಾತ್ರಾಶ್ರಾದ್ಧ, ಪುಷ್ಠಿಶ್ರಾದ್ಧ, ಮೊದಲಾದವು.

ಎಲ್ಲಾ ಶ್ರಾದ್ಧಗಳಲ್ಲಿ ಏಕೋದ್ದಿಷ್ಟ, ಪಾರ್ವಣ, ಸಪಿಂಡೀಕರಣ (ಸಪಿಂಡನ) ಮತ್ತು ವೃದ್ಧಿಶ್ರಾದ್ಧಗಳನ್ನು ಪ್ರಧಾನವಾದವುಗಳೆಂದು ಪರಿಗಣಿಸಲಾಗುತ್ತದೆ.

ಏಕೋದ್ದಿಷ್ಠ ಶ್ರಾದ್ಧವು ಕೇವಲ ಒಬ್ಬರಿಗಾಗಿಯೇ ಅಂದರೆ ಮೃತ ವ್ಯಕ್ತಿಯನ್ನು ಮಾತ್ರವೇ ಉದ್ದೇಶಿಸಿ ಮಾಡುವ ಕಾರ್ಯವಾಗಿದೆ. ಇದರಲ್ಲಿ ಕೇವಲ ಒಂದೇ ಒಂದು ಪಿಂಡವನ್ನು ಅರ್ಪಿಸಲಾಗುತ್ತದೆ.

ಪಾರ್ವಣ ಕ್ರಿಯೆಯಲ್ಲಿ, ಮೂರು ಪಿಂಡಗಳನ್ನು ಕ್ರಮವಾಗಿ ಪಿತ(ತಂದೆಗೆ), ಪಿತಾಮಹ (ತಂದೆಯ-ತಂದೆ ಅಥವಾ ತಾತ) ಮತ್ತು ಪ್ರಪಿತಾಮಹ (ತಂದೆಯ-ತಂದೆಯ-ತಂದೆ ಅಥವಾ ಮುತ್ತಾತ) ಇವರುಗಳಿಗೆ ಅರ್ಪಿಸಲಾಗುತ್ತದೆ.

ಸಪಿಂಡೀಕರಣ ಕಾರ್ಯವನ್ನು ವ್ಯಕ್ತಿಯು ಮರಣಿಸಿದ ನಂತರ ಬರುವ ಹನ್ನೆರಡನೇ ದಿನದಂದು ಮಾಡಲಾಗುತ್ತದೆ. ಈ ಕ್ರಿಯೆಯು ಮೃತ ವ್ಯಕ್ತಿಯ ಆತ್ಮವು ಅವನ ಪೂರ್ವಜರೊಂದಿಗೆ ಸೇರುವುದನ್ನು ಸಾಂಕೇತಿಕವಾಗಿ ತಿಳಿಸುತ್ತದೆ.

'ವೃದ್ಧಿಶ್ರಾದ್ಧ'ವನ್ನು 'ನಾಂದಿಮುಖಶ್ರಾದ್ಧ'ವೆಂದೂ ಕರೆಯಲಾಗುತ್ತದೆ. ಇದನ್ನು ಎಲ್ಲಾ ಶುಭಕಾರ್ಯಗಳ ಸಂದರ್ಭದಲ್ಲಿ ಉದಾಹರಣೆಗೆ ಮಗ ಅಥವಾ ಮಗಳ ಮದುವೆ, ಹೊಸ ಮನೆಯ ಪ್ರವೇಶದ ಸಮಯ, ಮೊದಲಾದ ಸಮಯಗಳಲ್ಲಿ ಕೈಗೊಳ್ಳಲಾಗುತ್ತದೆ. ಈ ಶ್ರಾದ್ಧಗಳಲ್ಲಿ 'ನಾಂದಿಮುಖಪಿತೃ'ಗಳೆಂದು ಕರೆಯಲ್ಪಡುವ ಮೂರು ತಲೆಮಾರಿನ ಮೇಲಿನ ಪಿತೃಗಳನ್ನು ಸೂಕ್ತವಾದ ಶ್ರಾದ್ಧಕಾರ್ಯಗಳಿಂದ ತೃಪ್ತಿಪಡಿಸಲಾಗುತ್ತದೆ.

## 10.8 ಪಾರ್ವಣ ಶ್ರಾದ್ಧ

ವೈದಿಕ ಕಾಲದ ಆರಂಭಿಕ ದಿನಗಳಲ್ಲಿ ಪ್ರತಿ 'ಆಹಿತಾಗ್ನಿ'ಯೂ ಸಹ ಅಮಾವಾಸ್ಯೆಯ ದಿನದಂದು ಪಿಂಡಪ್ರಧಾನವನ್ನು ಕಡ್ಡಾಯವಾಗಿ ಮಾಡಲೇಬೇಕಾದ ಶಾಸ್ತ್ರವಿಧಿತವಾದ ಕ್ರಿಯೆಯಾಗಿತ್ತು. ಈಗ ಪ್ರಚಲಿತದಲ್ಲಿರುವ ವಾರ್ಷಿಕ ಶ್ರಾದ್ಧವು ಅದರ ಅನುಕರಣೆಯಾಗಿದೆ. ಇದನ್ನು ಪಾರ್ವಣಶ್ರಾದ್ಧವೆಂದು ಕರೆಯುತ್ತಾರೆ. ಕೆಲವೊಮ್ಮೆ ವಾರ್ಷಿಕ ಶ್ರಾದ್ಧವನ್ನು 'ಮೃತಃ-ಅನ್ನಶ್ರಾದ್ಧ' ಎನ್ನುವ ಹೆಸರಿನಿಂದಲೂ ಕರೆಯಲಾಗುತ್ತದೆ. ಪಿತೃಗಳ ಪವಿತ್ರ ಸ್ಥಳಗಳು ಅಮಾವಾಸ್ಯೆ, ಕುತಪಕಾಲ (ಹಗಲಿನ 8ನೆಯ ಕಾಲ), ಆಕಾಶ, ದಕ್ಷಿಣದಿಕ್ಕು, ಬೆಳ್ಳಿ, ಅಪಸವ್ಯ, ನೀರು,

ಎಳ್ಳು, ದರ್ಬೆ 9, ಹಸುವಿನ ಹಾಲು, ಸಿಹಿ ಪದಾರ್ಥಗಳು, ಬಿಸಿ ಬಿಸಿ ಆಹಾರ, ತಾಮ್ರ, ಜೇನುತುಪ್ಪ, ಗೋಧಿ, ಗಯಾಶ್ರಾದ್ಧ ಮುಂತಾದವುಗಳು. ಪಿತೃದೇವತೆಗಳಿಗೆ ಕವ್ಯವನ್ನು ಅರ್ಪಿಸುವಾಗ ಸ್ವಧಾ ಎಂದು ಹೇಳಬೇಕು.

ಪಾರ್ವಣ ಶ್ರಾದ್ಧಕರ್ಮವು ಅನೇಕ ಆಚರಣೆಗಳನ್ನು ಒಳಗೊಂಡಿದ್ದು ಅವನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು.

ಮೊದಲಿಗೆ, ಶ್ರಾದ್ಧವನ್ನು ಆಚರಿಸುವವನು (ಕರ್ತಾ ಅಥವಾ ಶ್ರಾದ್ಧಕರ್ತಾ) ಹಿಂದಿನ ದಿನದಂದೇ ಯೋಗ್ಯ ಬ್ರಾಹ್ಮಣರನ್ನು ಶ್ರಾದ್ಧಕಾರ್ಯದಲ್ಲಿ ಪಾಲ್ಗೊಳ್ಳುವಂತೆ ಆಹ್ವಾನಿಸಿ, ಸೂಕ್ತವಾದ ಉಪಚಾರಗಳನ್ನು ಮತ್ತು ಭೋಜನವನ್ನು ತಮ್ಮಿಂದ ಸ್ವೀಕರಿಸಬೇಕೆಂದು ವಿನಂತಿಸಿಕೊಳ್ಳಬೇಕು. ಯಾವ ಬ್ರಾಹ್ಮಣರು ಸ್ವಗೋತ್ರ ಹಾಗು ವಂಶಕ್ಕೆ ಸೇರಿದವರಾಗಿರದೆ, ಶಾಸ್ತ್ರಪಾರಂಗತರಾಗಿದ್ದು, ವಿವಾಹಿತರು, ಆರೋಗ್ಯವಂತರು ಮತ್ತು ನಿಷ್ಕಲ್ಮಶರೂ ಆಗಿರುತ್ತಾರೋ ಅಂತಹವರನ್ನು ಶ್ರಾದ್ಧಕ್ಕಾಗಿ ಆಹ್ವಾನಿಸಬೇಕು. ಈ ವಿಧವಾಗಿ ಆಹ್ವಾನಿಸುವ ಕ್ರಿಯೆಯನ್ನು **'ಕ್ಷಣ'** ಎಂದು ಕರೆಯಲಾಗುತ್ತದೆ.

ವಿಶ್ವೇದೇವತೆ*ಗಳನ್ನು ಪ್ರತಿನಿಧಿಸಲು ಇಬ್ಬರು ಬ್ರಾಹ್ಮಣರನ್ನು ಮತ್ತು ಪಿತೃಗಳನ್ನು ಪ್ರತಿನಿಧಿಸಲು ಮೂರುಜನ ಬ್ರಾಹ್ಮಣರನ್ನು ಆಹ್ವಾನಿಸಬೇಕೆಂದು ಶಾಸ್ತ್ರಗಳು ಹೇಳುತ್ತವಾದರೂ ರೂಢಿಯಲ್ಲಿ ತಲಾ ಒಬ್ಬರಂತೆ ಕೇವಲ ಇಬ್ಬರನ್ನೇ ಆಹ್ವಾನಿಸಲಾಗುತ್ತದೆ - ಒಬ್ಬರು ವಿಶ್ವೇದೇವತೆಗಳನ್ನು ಮತ್ತು ಇನ್ನೊಬ್ಬರು ಪಿತೃದೇವತೆಗಳನ್ನು ಪ್ರತಿನಿಧಿಸಲು. (*ಶ್ರಾದ್ಧವನ್ನು ಮುನ್ನಡೆಸುವ ಶಕ್ತಿಗಳನ್ನು ವಿಶ್ವೇದೇವತೆಗಳನ್ನುತ್ತಾರೆ. ಧರ್ಮ ಮತ್ತು ವಿಶ್ವಾ ಇವರಿಗೆ ಜನಿಸಿದ ಸತ್ಯ, ವಸು, ಪುರೂರವ, ವಿಲೋಚನ, ಕ್ರತು, ರುದ್ರ, ದಕ್ಷ, ಕಾಲ, ಕಾಮ, ಧನೂ, ಧರ, ಆರ್ದ್ರವ ಮೊದಲಾದ ಹದಿಮೂರು ಜನರನ್ನು ವಿಶ್ವೇದೇವತೆಗಳೆನ್ನುತ್ತಾರೆ).

ಯತಿಗಳು ಅಥವಾ ಸಂನ್ಯಾಸಿಗಳನ್ನು ಶ್ರಾದ್ಧಕಾರ್ಯಗಳಿಗೆ ಆಹ್ವಾನಿಸುವುದು ಅತ್ಯಂತ ಶ್ರೇಯಸ್ಕರವೆಂದು ಪರಿಗಣಿಸಲಾಗುತ್ತದೆ. ಆದರೆ ವಾಸ್ತವದಲ್ಲಿ ಯತಿಗಳು ಇಂತಹ ಕಾರ್ಯಗಳ ಆಹ್ವಾನವನ್ನು ಸ್ವೀಕರಿಸುವುದಿಲ್ಲ.

ಒಂದೊಮ್ಮೆ ಶ್ರಾದ್ಧಕಾರ್ಯಕ್ಕೆ ಆಹ್ವಾನವನ್ನು ಕೊಟ್ಟ ಮೇಲೆ ಕರ್ತಾ ಮತ್ತು ಬೋಕ್ತಾ (ಆಹ್ವಾನಿತರು) ಇಬ್ಬರೂ ಸಹ ಬ್ರಹ್ಮಚರ್ಯವನ್ನು ಪಾಲಿಸಬೇಕು ಮತ್ತು ಕೆಲವೊಂದು ನಿಯಮಗಳನ್ನು ಚಾಚೂ ತಪ್ಪದೆ ಅನುಸರಿಸಬೇಕು. ಉದಾಹರಣೆಗೆ ಸುಳ್ಳು ಹೇಳದಿರುವುದು, ಕೋಪಿಸಿಕೊಳ್ಳದಿರುವುದು, ಮುಂತಾದವು.

ಈ ಸಂದರ್ಭದಲ್ಲಿ ಹಣೆಯ ಮೇಲೆ ಧಾರಣೆ ಮಾಡಬೇಕಾದ ಧಾರ್ಮಿಕ ಚಿಹ್ನೆಗಳನ್ನು ಅವರವರ ಕುಲಾಚಾರ ಮತ್ತು ವಂಶಾಚಾರಕ್ಕೆ ತಕ್ಕಂತೆ ಅನುಸರಿಸಬೇಕು.

ಈ ಕೆಳಗಿನ ವಸ್ತುಗಳನ್ನು ಶ್ರಾದ್ಧದ ಸಮಯದಲ್ಲಿ ಬೇಯಿಸಿದ ರೂಪದಲ್ಲಿ ಮತ್ತು ಬೇಯಿಸದೇ ಇರುವ ರೂಪದಲ್ಲಿ ಬಳಸಬೇಕು - ಹಾಲು, ಗಂಗಾಜಲ, ಜೇನುತುಪ್ಪ, ಎಳ್ಳು, ಗೋಧಿ, ಉದ್ದು, ಹೆಸರು ಮತ್ತು ಎಣ್ಣೆಯಲ್ಲಿ ಕರೆದ ಪದಾರ್ಥಗಳು.

ಸ್ವಗೋತ್ರಕ್ಕೆ ಸೇರಿದ ಸ್ನೇಹಿತರು, ದೊಡ್ಡಪ್ಪಂದಿರ ಮತ್ತು ಚಿಕ್ಕಪ್ಪಂದಿರ ಮಕ್ಕಳನ್ನು ಮತ್ತು ತಮ್ಮ ಕುಲಕ್ಕೆ ಸೇರಿದ ವಿಶ್ವಾಸಪಾತ್ರರನ್ನೂ ಸಹ ಶ್ರಾದ್ಧ ಸಮಯದಲ್ಲಿ ಆಹಾರವನ್ನು ತಯಾರಿಸುವುದಕ್ಕೆ ಆಹ್ವಾನಿಸಬಹುದು.

ಆಹ್ವಾನಿತ ಬ್ರಾಹ್ಮಣರಿಗೆ ಉಣಬಡಿಸುವ ಕಾರ್ಯಕ್ಕೆ ಮೊದಲ ಆದ್ಯತೆಯನ್ನು ಶ್ರಾದ್ಧಕರ್ತನ ಸೊಸೆಗೆ ಕೊಡಬೇಕು.

ಕರ್ತನು ಶ್ರಾದ್ಧಕರ್ಮಗಳನ್ನು ಆರಂಭಿಸುವುದಕ್ಕೆ ಮುಂಚೆ ಮಾಡುವ ಸಂಕಲ್ಪವು ಶ್ರಾದ್ಧಕ್ರಿಯೆಯಲ್ಲಿನ ಮೊದಲನೆಯ ಹಂತವಾಗಿದೆ.

ಕಲಶ (ಪವಿತ್ರ ಜಲವುಳ್ಳ ಪಾತ್ರೆ) ಸ್ಥಾಪನೆ ಮತ್ತು ಕಲಶೋದಕವನ್ನು ಶ್ರಾದ್ಧ ಕರ್ಮಗಳನ್ನು ಆಚರಿಸುವ ಜಾಗದ ಸುತ್ತಲೂ ಪ್ರೋಕ್ಷಿಸುವುದು ಮುಂದಿನ ಹಂತ.

ಆಹ್ವಾನಿತ ಬ್ರಾಹ್ಮಣರನ್ನು ಬರಮಾಡಿಕೊಳ್ಳಲು ಎರಡು ಮಂಡಲಗಳು ಅಥವಾ ಚಿತ್ರಗಳನ್ನು (ಒಂದು ಚೌಕಾಕಾರದ್ದಾಗಿದ್ದರೆ ಮತ್ತೊಂದು ವೃತ್ತಾಕಾರವಾದದ್ದು) ಮನೆಯೊಳಗಿನ ನೆಲದ ಮೇಲೆ ಸೂಕ್ತ ಸ್ಥಳಗಳಲ್ಲಿ ಬಿಡಿಸಬೇಕು. ಮೊದಲನೆಯದು (ಚೌಕಾಕಾರ) ವಿಶ್ವೇದೇವತೆಗಳನ್ನು ಪ್ರತಿನಿಧಿಸುವ ಬ್ರಾಹ್ಮಣನಿಗಾಗಿ ಮತ್ತು ಎರಡನೆಯದನ್ನು ಪಿತೃದೇವತೆಗಳನ್ನು ಪ್ರತಿನಿಧಿಸುವ ಬ್ರಾಹ್ಮಣನಿಗಾಗಿ ಮೀಸಲಿಡಬೇಕು. ಮೊದಲು, ಶ್ರಾದ್ಧಕರ್ತನು ಆ ಬ್ರಾಹ್ಮಣರ ಪಾದಗಳನ್ನು ಈ ಮಂಡಲಗಳ ಮೇಲೆ ತೊಳೆಯಬೇಕು.

ಇದಾದ ನಂತರ ದುಷ್ಟ ಶಕ್ತಿಗಳನ್ನು (ರಾಕ್ಷಸರು, ಪಿಶಾಚ, ಮೊದಲಾದವುಗಳು) ಓಡಿಸಲು ಎಳ್ಳು ಕಾಳುಗಳನ್ನು ಸೂಕ್ತ ಮಂತ್ರಗಳೊಂದಿಗೆ ಶ್ರಾದ್ಧ ಮಾಡುವ ಸ್ಥಳದಲ್ಲೆಲ್ಲಾ ಪ್ರೋಕ್ಷಿಸುವುದು ಮುಂದಿನ ಹಂತವಾಗಿದೆ.

ಇದಾದ ನಂತರ ಮೊದಲನೆಯ ಬ್ರಾಹ್ಮಣನ ಮೂಲಕ ವಿಶ್ವೇದೇವತೆಗಳ ಪೂಜೆಯನ್ನು ಮತ್ತು ಎರಡನೆಯ ಬ್ರಾಹ್ಮಣನ ಮೂಲಕ ಪಿತೃದೇವತೆಗಳನ್ನು ಪೂಜಿಸಲಾಗುತ್ತದೆ. ಈ ಕ್ರಿಯೆಗೆ ಎಳ್ಳು ಮತ್ತು ದರ್ಭೆ ಹುಲ್ಲನ್ನಿರಿಸಿರುವ ಅರ್ಘ್ಯಪಾತ್ರೆಗಳು ಬಹಳ ಪ್ರಮುಖವಾದವುಗಳಾಗಿವೆ.

ಇದಾದ ನಂತರ ಪಾಣಿಹೋಮ ಅಂದರೆ ತಯಾರಿಸಿದ ಆಹಾರದ (ನೈವೇದ್ಯ/ಎಡೆ) ಸ್ವಲ್ಪ ಭಾಗವನ್ನು ಪಿತೃದೇವತೆಗಳನ್ನು ಪ್ರತಿನಿಧಿಸುವ ಬ್ರಾಹ್ಮಣನ ಬಲಗೈಯ್ಯಲ್ಲಿರುಸುವುದಾಗಿದೆ.

ಇದಾದ ನಂತರ ಬ್ರಾಹ್ಮಣ ಭೋಜನ ಅಥವಾ ಆಹ್ವಾನಿತರಿಗೆ ಅನ್ನಸಂತರ್ಪಣೆ ಮಾಡುವ ಕಾರ್ಯಕ್ರಮವಿರುತ್ತದೆ. ಅವರಿಗೆ ರುಚಿಕರವಾದ ಮತ್ತು ಸ್ವಾದಿಷ್ಟವಾದ ಭೋಜನವನ್ನು ಅವರು ತೃಪ್ತಿಯಾಗುವವರೆಗೆ ಉಣಬಡಿಸಬೇಕು. ಅವರು ಊಟ ಮಾಡುತ್ತಿರುವಾಗ ಉಳಿದ ಬ್ರಾಹ್ಮಣರನ್ನು ರಾಕ್ಷೋಜ್ಞಮಂತ್ರಗಳು, ಪವಮಾನ

ಮಂತ್ರಗಳು ಅಥವಾ ಉಪನಿಷತ್ತಿನ ಮಂತ್ರಗಳನ್ನು ಪಠಿಸಲು ಭಿನ್ನವಿಸಿಕೊಳ್ಳಬೇಕು. ಇದನ್ನು 'ಅಭಿಶ್ರವಣ'ವೆಂದು ಕರೆಯುತ್ತಾರೆ ಮತ್ತು ಇದು ಊಟ ಮಾಡುತ್ತಿರುವ ಬ್ರಾಹ್ಮಣರ ಮನಸ್ಸಿನಲ್ಲಿ ಆಧ್ಯಾತ್ಮಿಕ ಭಾವನೆಯನ್ನು ಉಂಟು ಮಾಡುತ್ತದೆ. ಪಿತೃಗಳು ತಮ್ಮ ಪ್ರೇತ ಶರೀರಗಳ ಮೂಲಕ ಈ ಬ್ರಾಹ್ಮಣರ ದೇಹಗಳಲ್ಲಿ ಸೇರಿರುತ್ತಾರೆನ್ನುವ ನಂಬಿಕೆಯಿರುವುದರಿಂದ ಅವರೇ ಆಹಾರವನ್ನು ಸ್ವೀಕರಿಸಿ ಮತ್ತು ಸಂತೃಪ್ತರಾಗುತ್ತಾರೆ.

ಇದಾದ ನಂತರ ಪಿಂಡಪ್ರಧಾನ ಕಾರ್ಯವಿರುತ್ತದೆ. ಪಿಂಡಗಳೆಂದರೆ ಅನ್ನದ ಉಂಡೆಗಳು. ಪಿಂಡಗಳನ್ನು ಬ್ರಾಹ್ಮಣ ಭೋಜನದ ನಂತರ ಪಾತ್ರೆಗಳಲ್ಲಿ ಉಳಿದ ಅನ್ನ ಹಾಗೂ ಇತರೇ ಆಹಾರ ಪದಾರ್ಥಗಳಿಂದ ತಯಾರಿಸಲಾಗುತ್ತದೆ. ಹೀಗೆ ತಯಾರಿಸಲಾದ ಮೂರು ಪಿಂಡಗಳನ್ನು ದರ್ಭೆಯನ್ನಿರಿಸಿದ ನೆಲದ ಮೇಲೆ ಇಟ್ಟು ಮೂರು ತಲೆಮಾರಿನ ಪೂರ್ವಿಕರಿಗೆ ಅರ್ಪಿಸಲಾಗುತ್ತದೆ.

'ಬೌಧಾಯನ' ಪದ್ಧತಿಯಂತೆ ಪಿಂಡಗಳನ್ನು ತೆರೆದ (ಬಹಿರಂಗವಾದ) ಸ್ಥಳಗಳಲ್ಲಿ, ಎಲ್ಲಿ ಕಾಗೆಗಳು ಬಂದು ತಿನ್ನುವುದಕ್ಕೆ ಅನುಕೂಲವಾಗುತ್ತದೆಯೋ ಅಲ್ಲಿ ಇರಿಸಬೇಕು. ಪಿತೃಗಳು ಕಾಗೆಗಳ ಶರೀರಗಳಲ್ಲಿ ಸೂಕ್ಷ್ಮರೂಪದಲ್ಲಿ ಸೇರಿಕೊಂಡು ಆ ಪಿಂಡ ಸೇವನೆಯಿಂದ ತೃಪ್ತರಾಗುತ್ತಾರೆ ಎಂದು ಹೇಳಲಾಗುತ್ತದೆ.

ಬ್ರಾಹ್ಮಣರು ತದನಂತರ ಕರ್ತಾ ಹಾಗು ಅವನ ಕುಟುಂಬವನ್ನು ಹರಿಸಿ ಅಲ್ಲಿಂದ ಹೊರಡುತ್ತಾರೆ. ಗೌರವ ಸೂಚ್ಯರ್ಥವಾಗಿ ಕರ್ತನು ಸ್ವಲ್ಪ ದೂರದವರೆಗೆ ಅವರನ್ನು ಹಿಂಬಾಲಿಸಿ ಬೀಳ್ಕೊಟ್ಟು ಬರಬೇಕು.

ಇದಾದ ನಂತರ, ತಾವು ಎಸಗಿದ ಶ್ರಾದ್ಧ ಕಾರ್ಯದಲ್ಲಿ ಉಂಟಾಗಿರುವ ದೋಷಗಳನ್ನು ಕ್ಷಮಿಸೆಂದು ಬೇಡಿಕೊಳ್ಳುತ್ತಾ ಶ್ರಾದ್ಧದ ಫಲವನ್ನು ಸಂಪೂರ್ಣವಾಗಿ ವಾಸುದೇವ ಅಥವಾ ಕೃಷ್ಣನಿಗೆ ಸಮರ್ಪಿಸ ಬೇಕು.

## 10.9 ಗಯಾ ಶ್ರಾದ್ಧ

ಶತಶತಮಾನಗಳಿಂದ ಗಯೆಯಲ್ಲಿ ಶ್ರಾದ್ಧ ಮಾಡುವುದನ್ನು ಅತ್ಯಂತ ಪುಣ್ಯಪ್ರದವೆಂದೂ ಮತ್ತು ಹಿರಿಯ ಮಗನು (ಅಥವಾ ಯಾವುದಾದರೂ ಒಬ್ಬ ಮಗನು) ಕಡ್ಡಾಯವಾಗಿ ಮಾಡಲೇಬೇಕಾದ ಕಾರ್ಯವೆಂದು ಶಾಸ್ತ್ರಗಳು ಸಾರುತ್ತವೆ. ಇದು ಅಪರಿಮಿತ ಫಲಗಳನ್ನು ದಯಪಾಲಿಸುವುದೆಂದೂ ಹೇಳಲಾಗಿದೆ.

ಗಯಾಶ್ರಾದ್ಧವನ್ನು ಮೂರು ಹಂತಗಳಲ್ಲಿ ಕೈಗೊಳ್ಳಲಾಗುವುದು. ಮೊದಲನೆಯದನ್ನು ಕರ್ತನು ಫಲ್ಗು ನದಿಯಲ್ಲಿ ಸ್ನಾನ ಮಾಡಿ ನದಿಯಲ್ಲಿ ತರ್ಪಣವನ್ನು ಬಿಟ್ಟು, ಪಿಂಡಪ್ರದಾನ ಮಾಡಬೇಕು. ಆಮೇಲೆ ಗುಡಿಯಲ್ಲಿನ ವಿಷ್ಣುದೇವರ ಪಾದಗಳ ಬಳಿಯಲ್ಲಿ ಪಿಂಡಗಳನ್ನು ಅರ್ಪಿಸಬೇಕು. ಇದಾದ ನಂತರ ಪ್ರಸಿದ್ಧವಾದ 'ಅಕ್ಷಯವಟ'ದ (ಅಶ್ವತ್ಥ ವೃಕ್ಷ) ಬುಡದಲ್ಲಿ ಪಿಂಡಪ್ರದಾನ ಮಾಡಬೇಕು. ಇದು ಗಯಾಶ್ರಾದ್ಧದ ಕ್ರಿಯೆಯನ್ನು ಪೂರ್ಣಗೊಳಿಸುತ್ತದೆ.

ಗಯಾಶ್ರಾದ್ಧವನ್ನು ಯಾರು ಬೇಕಾದರೂ ತಮಷ್ಟಕ್ಕೆ ತಾವೇ ಮಾಡಿಕೊಳ್ಳಬಹುದು.

ಒಂದು ವೇಳೆ ಒಬ್ಬನು ಗಯೆಯಲ್ಲಿ ತನ್ನ ಪಿತೃಗಳಿಗೆ ಶ್ರಾದ್ಧಕಾರ್ಯವನ್ನು ಮಾಡಿದ್ದೇ ಆದಲ್ಲಿ ತನ್ನ ಜೀವಿತಾವಧಿಯಲ್ಲಿ ಪುನಃ ಪಿತೃ ಶ್ರಾದ್ಧವನ್ನು ಮಾಡಬೇಕಾಗಿಲ್ಲವೆಂದು ಹೇಳಲಾಗಿದೆ. ಕೇವಲ ಗಯಾಶ್ರಾದ್ಧವನ್ನು ಮಾಡಿದವರನ್ನು ಪ್ರಶಂಸಿಸುವುದಕ್ಕೋಸ್ಕರ ಆ ಮಾತುಗಳನ್ನು ಹೇಳಲಾಗಿದೆಯಷ್ಟೆ ಎಂದು ಕೆಲವರ ಅನಿಸಿಕೆ. ಆದ್ದರಿಂದ, ಶ್ರಾದ್ಧಕಾರ್ಯವನ್ನು ಮಾಡುವುದನ್ನು ತಪ್ಪದೇ ಮುಂದುವರೆಸಿಕೊಂಡು ಹೋಗಬೇಕೆಂದು ಅವರು ಹೇಳುತ್ತಾರೆ.

ಪ್ರತಿಯೊಬ್ಬ ಜೀವಿಯೂ ತನ್ನ ಜೀವನದಲ್ಲಿ ಸುಖ, ಶಾಂತಿ, ನೆಮ್ಮದಿಯನ್ನು ಬಯಸುತ್ತಾನೆ. ಇವುಗಳನ್ನು ಪಡೆಯಲು ಕರ್ಮ ಮತ್ತು ಜ್ಞಾನ ಅತ್ಯವಶ್ಯ, ಐಹಿಕ ಸುಖ ಮತ್ತು ಮುಕ್ತಿ ಮಾನವನ ಗುರಿ. ಇದನ್ನೇ ಧರ್ಮ ಅರ್ಥ, ಕಾಮ, ಮೋಕ್ಷ, ಎಂದು ವಿವರಿಸಬಹುದು. ಅರ್ಥ ಕಾಮಗಳನ್ನು ಸುಸಂಬದ್ಧವಾಗಿ ಇಡುವುದೇ ಧರ್ಮದ ಉದ್ದೇಶ. ಜೀವನವು ವ್ಯವಸ್ಥಿತವಾಗಿ ಇರಬೇಕಾದರೆ ಅರ್ಥ ಕಾಮಗಳು

ಸುಸಂಬದ್ಧವಾಗಿ ಇರಬೇಕು ಹೀಗೆ ಪರಮೋಚ್ಚ ಗುರಿ ಸಾಧನೆಗೆ ಇಹ ಮತ್ತು ಪರ ಎರಡೂ ಅಗತ್ಯ. ಕರ್ಮ ಮತ್ತು ಜ್ಞಾನ ಇವು ನಿತ್ಯವಾದವುಗಳು. ಇವು ಎಂದೆದಿಗೂ ನೂತನವಾದದ್ದು ಅಲ್ಲದೇ ಅನಿವಾರ್ಯವಾದವುಗಳು. ಜೀವನದ ಅವಿಭಾಜ್ಯ ಅಂಗಗಳಲ್ಲಿ ಒಂದು. ಸತ್ಕರ್ಮಗಳಲ್ಲಿ ವೈದಿಕ ಕರ್ಮಾಚರಣೆಯೂ ಒಂದು. ಅದನ್ನು ತಿಳಿಯಲು ಪ್ರಯತ್ನಿಸೋಣ. ಈ ಪುಸ್ತಕದಲ್ಲಿ ಬ್ರಾಹ್ಮಣರ ಸಂಖ್ಯೆ, ದೈಹಿಕ ಶ್ರಮ, ಕಾಲ, ಮಂತ್ರಗಳನ್ನು ಸಂಕ್ಷಿಪ್ತ ವಿವರಣೆಯೊಂದಿಗೆ ಕೊಡಲಾಗಿದೆ. ವಿಸ್ತಾರ ಮಾಡಿಕೊಳ್ಳಬಹುದು. ಮಾನಸಿಕ ಬೌದ್ಧಿಕ ಶ್ರಮವನ್ನು ವಿಸ್ತಾರಗೊಳಿಸಲಾಗಿದೆ.

**ಶ್ರಾದ್ಧ ಕರ್ಮದಲ್ಲಿ ನಿಷಿದ್ಧ ಪದಾರ್ಥಗಳು**

ಇಂಗು – ಈರುಳ್ಳಿ – ಬೆಳ್ಳುಳ್ಳಿ – ಬದನೇಕಾಯಿ – ನುಗ್ಗೆಕಾಯಿ – ಕೆಂಚನಾಳದ ಕಾಯಿ – ಗಜ್ಜರಿ – ಬೂದುಗುಂಬಳ ಸೋರೆಕಾಯಿ – ಕರಿ ಉಪ್ಪು ಮುಂತಾದವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದೆಂದು ಅಖಿಲಾಂಡಕೋಟಿ ಬ್ರಹ್ಮಾಂಡನಾಯಕರಾದ ಶ್ರೀ ಭಗವಾನ್ ವೇದವ್ಯಾಸದೇವರು ಹೇಳಿದ್ದಾರೆ.

**ನವ ಶ್ರಾದ್ಧವೆಂದರೆ** - ಪ್ರಥಮ – ತೃತೀಯ – ಪಂಚಮ – ಸಪ್ತಮ – ನವಮ ಹೀಗೆ 10 ದಿವಸಗಳಲ್ಲಿ ಮಾಡುವ ವಿಷಮ ಶ್ರಾದ್ಧಗಳಿಗೆ " ನವ ಶ್ರಾದ್ಧ " ಎನ್ನುತ್ತಾರೆ. 10 ದಿನಗಳಲ್ಲಿ ಮಾಡುವ ಪ್ರೇತ ಶ್ರಾದ್ಧದಲ್ಲಿ ಪಿತೃ ಶಬ್ದ ಹೇಳದೆ " ಪ್ರೇತ " ಯೆಂದು ಮಂತ್ರವಿಲ್ಲದೆ ಎಳ್ಳು ಹಾಕಬೇಕು. ಪ್ರೇತ ಶಬ್ದದಿಂದ " ಪಾಣಿ ಹೋಮ " ಮಾಡಬೇಕು.

**ಮಾಸಿಕ 16 ಶ್ರಾದ್ಧ ವೆಂದರೆ** - ಆದ್ಯ – ಊನ – ದ್ವಿತೀಯಾ – ತೃತೀಯಾ – ಚತುರ್ಥ – ಪಂಚಮ – ಷಷ್ಠ – ಊನ ಷಣ್ಮಾಸಿಕ – ಸಪ್ತಮ – ಅಷ್ಟಮ – ನವಮ – ದಶಮ – ಏಕಾದಶ – ದ್ವಾದಶ – ಊನಾಬ್ದಿಕ – ಆಬ್ದಿಕ.

ಓಂ ತತ್ಸತ್

# ಅರ್ಪಣೆ

## ಪೂಜ್ಯ ತಾಯಿ - ತಂದೆ



ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ದಿಕ್ಷಿತ,

(1935 – 2002)



ಶ್ರೀ ದಕ್ಷಿಣಾಮೂರ್ತಿ ತಿಮ್ಮಣ್ಣ ದಿಕ್ಷಿತ, ಓಣಿಕೈ

(1927 – 1996)

## ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯ ಪ್ರಕಟಣೆಗಳು

1. ದೈನಂದಿನ ಪ್ರಾರ್ಥನಾ ಶ್ಲೋಕಗಳು
2. ಸಂಧ್ಯಾವಂದನಾದಿ ನಿತ್ಯಕರ್ಮಗಳು
3. ನಿತ್ಯೋಪಯೋಗಿ ವೇದ ಮಂತ್ರಗಳು
4. ನಾಮ ಪಾರಾಯಣ ಸ್ತೋತ್ರಗಳು
5. ಪಂಚಾಯತನ ದೇವ ಪೂಜಾ ವಿಧಿ
6. ನಿತ್ಯ ಭಜನಾ ಪದ್ಧತಿ
7. ಆದಿ ಶಂಕರಾಚಾರ್ಯರ ಕೃತಿಗಳು
8. ಹಬ್ಬ-ಹರಿದಿನಗಳ ಆಚರಣೆ
9. ಓಣಿಕೈ ಮನೆತನ - ವಂಶ ವೃಕ್ಷ
10. ಹವ್ಯಕರ ಹಾಡುಗಳು
11. ಬಹೂಪಯೊಗೀ ನಾಮಾವಳಿಗಳು
12. ಶ್ರೀ ಗುರುಚರಿತ್ರ ಪದ್ಯ

## ಸದ್ಗುರು ಸುಜ್ಞಾನ ವೇದಿಕೆಯ ಪ್ರಕಟಣೆಗಳು

1. ವೈದಿಕ-ಜೀವನ ಕೈಪಿಡಿ
2. ವೈದಿಕ ಜ್ಯೋತಿ
3. ಪ್ರತಿ ಸಾಂವತ್ಸರಿಕ ಶ್ರಾದ್ಧ ಪ್ರಯೋಗ
4. ದೇವಿ ಆರಾಧನಾ ಪ್ರದೀಪ
5. ವಾಸ್ತು ಪ್ರಯೋಗ ದೀಪ
6. ಪುರಾಣೋಕ್ತ ಶ್ಲೋಕೈ: ಪ್ರತಿ ಸಾಂವತ್ಸರಿಕ ಶ್ರಾದ್ಧ ಪ್ರಯೋಗ



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,
ಕರ್ನಾಟಕ, ದೂರವಾಣಿ : +91 94482 42402, sddixit@outlook.com